CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೪, ೨೦೦೪ (ಫಾಲ್ಗುಣ ೧೪, ಶಕ ವರ್ಷ ೧೯೨೫) | ಸಂಚಿಕೆ ೧೦ |
|---|---|---|


## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್. ಚೌಕ, ಬೆಂಗಳೂರು – 560 002

**ಪ್ರಕಟಣೆ**

**ಸಂಖ್ಯೆ: ಜೆಡಿಟಿಪಿ : ಆಸ : ಪಿಆರ್ : 20 : 02-03, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ, 2004**

ಬೆಂಗಳೂರು ನಗರಕ್ಕೆ ಸರ್ಕಾರದ ಆದೇಶದ ಸಂಖ್ಯೆ: ಹೆಚ್.ಯು.ಡಿ–139 : ಎಂಎನ್‌ಜೆ :94, ದಿನಾಂಕ: 05-01-1995 ರಲ್ಲಿ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯನ್ನು ಅನುಮೋದಿಸಿದ್ದು, ವಲಯ ನಿಯಮಗಳನ್ನು ಸಹ ಪ್ರತ್ಯೇಕವಾಗಿ ಪ್ರಕಟಿಸಲಾಗಿದ್ದು;

ಕರ್ನಾಟಕ ಸರ್ಕಾರವು ಸರ್ಕಾರದ ಆದೇಶದ ಸಂಖ್ಯೆ: ಯುಡಿಡಿ–223 : ಎಂಎನ್‌ಯು : 2001 ರ ದಿನಾಂಕ: 07-01-2002 ರಲ್ಲಿ ಹೊಸ ಕಟ್ಟಡ ಉಪವಿಧಿಗಳನ್ನು ತಯಾರಿಸಿ ಪ್ರಕಟಿಸಲು ಸೂಚಿಸಲಾಗಿದ್ದು;

ಕೆ.ಎಂ.ಸಿ ಕಾಯ್ದೆ 1976 (ಕರ್ನಾಟಕ ಕಾಯ್ದೆ 14 ರ 1977) ರ ಸೆಕ್ಷನ್ 295ರ ಪ್ರಕಾರ ಸೆಕ್ಷನ್ 423 ನ್ನು ಬಳಸಿಕೊಂಡು, ಬೆಂಗಳೂರು ಮಹಾನಗರ ಪಾಲಿಕೆಯು "ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡ ಉಪವಿಧಿಗಳು–2003" ರ ಕರಡು ಪ್ರತಿಯನ್ನು ತಯಾರಿಸಿ, ಈಗ ಜಾರಿಯಲ್ಲಿರುವ ಹಿಂದಿನ ಬೆಂಗಳೂರು ನಗರ ಕಾರ್ಪೊರೇಷನ್ ಕಟ್ಟಡ ಉಪವಿಧಿಗಳು, 1983 ನ್ನು ರದ್ದು ಪಡಿಸಿ ಸೆಕ್ಷನ್ 426 ರ ಕ್ಲಾಸ್ (ಎ) ರ ಪ್ರಕಾರ ಸಾರ್ವಜನಿಕರ ಸಲಹೆ / ಆಹವಾಲುಗಳನ್ನು ಸಲ್ಲಿಸಲು ಹೊಸ ಕರಡು ಉಪವಿಧಿಗಳನ್ನು ಸರ್ಕಾರದ ರಾಜ್ಯ ಪತ್ರದಲ್ಲಿ ದಿನಾಂಕ: 07-02-2003 ರಂದು ಪ್ರಕಟಿಸಲಾಗಿದ್ದು;

ಸಾರ್ವಜನಿಕರಿಂದ ಸ್ವೀಕರಿಸಲಾದ ಹಲವಾರು ಸಲಹೆ / ಆಹವಾಲುಗಳನ್ನು ಪರಿಗಣಿಸಿ, ಸಿವಿಕ್ ಸಂಸ್ಥೆಗಳು ಮತ್ತು ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ರವರೊಂದಿಗೆ ಸಭೆಗಳನ್ನು ಕೂಡ ನಡೆಸಿದ ತರುವಾಯ ಕೆ.ಎಂ.ಸಿ ಕಾಯ್ದೆ 1976 ರನ್ವಯ ಬೆಂಗಳೂರು ಮಹಾನಗರ ಪಾಲಿಕೆಯ ಕಟ್ಟಡ ಉಪವಿಧಿಗಳು–2003 ನ್ನು ಅಂತಿಮ ಅನುಮೋದನೆ ಕೋರಿ ಸರ್ಕಾರಕ್ಕೆ ಸಲ್ಲಿಸಲಾಗಿದ್ದು;

ಕರ್ನಾಟಕ ಸರ್ಕಾರವು ಸರ್ಕಾರದ ಆದೇಶ ಸಂಖ್ಯೆ: ಯುಡಿಡಿ : 223 : ಎಂಎನ್‌ಯು 2001 ರ ದಿನಾಂಕ: 21-02-2004 ರಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ಪರಿಷ್ಕೃತ ಕಟ್ಟಡ ಉಪವಿಧಿಗಳು–2003 ಕ್ಕೆ ಅನುಮೋದನೆಯನ್ನು ಅಂಗೀಕರಿಸಿ, ಉಪವಿಧಿಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಅಂತಿಮವಾಗಿ ಪ್ರಕಟಿಸಲು ನಿರ್ದೇಶಿಸುತ್ತಾ, ಅಂತಿಮ ಪ್ರಕಟಣೆ ಹೊರಡಿಸಿದ ದಿನಾಂಕದಿಂದ ಮೂರು ತಿಂಗಳ ನಂತರ ಚಾಲ್ತಿಗೆ ಬರುವಂತೆ ಬೆಂಗಳೂರು ಮಹಾನಗರ ಪಾಲಿಕೆಯ ಹೊಸ ಕಟ್ಟಡ ಉಪವಿಧಿಗಳು–2003 ನ್ನು ಜಾರಿಗೊಳಿಸಲು ಆದೇಶಿಸಿದ್ದು;

ಆದ್ದರಿಂದ, ಈ ಬೆಂಗಳೂರು ಮಹಾನಗರ ಪಾಲಿಕೆಯ ಹೊಸ ಕಟ್ಟಡ ಉಪವಿಧಿಗಳು–2003 ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ ಮೂರು ತಿಂಗಳ ನಂತರ ಚಾಲ್ತಿಗೆ ಬರುತ್ತದೆ ಎಂದು ಸಂಬಂಧಪಟ್ಟ ಎಲ್ಲಾ ನಾಗರೀಕರ ಗಮನಕ್ಕೆ ತರಲು ಪ್ರಕಟಿಸಲಾಗಿದೆ.

ಬೆಂಗಳೂರು ಮಹಾನಗರ ಪಾಲಿಕೆಯ ಕಟ್ಟಡ ಉಪವಿಧಿಗಳು–2003 ರ ಆಂಗ್ಲ ಮತ್ತು ಕನ್ನಡ ಭಾಷೆಯಲ್ಲಿ ಮುದ್ರಿತ ಪ್ರತಿಯನ್ನು ಕೊಳ್ಳಲು ಇಚ್ಛಿಸುವ ನಾಗರೀಕರು ಜಂಟಿ ನಿರ್ದೇಶಕರು, ನಗರ ಯೋಜನೆ ವಿಭಾಗ, ಬೆಂಗಳೂರು ಮಹಾನಗರ ಪಾಲಿಕೆ ಕಛೇರಿಗಳು, ನರಸಿಂಹರಾಜ ಚೌಕ, ಬೆಂಗಳೂರು – 560 002 ರಲ್ಲಿ ಪ್ರತಿಯೊಂದಕ್ಕೆ ರೂ. 100.00 ಪಾವತಿಸಿ ಪಡೆಯಬಹುದಾಗಿದೆ.

**ಎಂ.ಆರ್. ಶ್ರೀನಿವಾಸಮೂರ್ತಿ**
ಆಯುಕ್ತರು
ಬೆಂಗಳೂರು ಮಹಾನಗರ ಪಾಲಿಕೆ

## ಕಟ್ಟಡ ಉಪವಿಧಿಗಳು–2003

**ಪ್ರಸ್ತಾವನೆ:–**

ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮ, 1961, ಇದರ ಅಡಿಯಲ್ಲಿ ಬೆಂಗಳೂರು ನಗರದ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆ ಮತ್ತು ತತ್ಸಂಬಂಧ ಭೂ ಉಪಯೋಗ ವಲಯ ನಿಬಂಧನೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಹೆಚ್.ಯು.ಡಿ.139/ ಎಂ.ಎನ್.ಜೆ.94. ದಿನಾಂಕ: 05-01-1995 ಇದರಲ್ಲಿ ಅನುಮೋದಿಸಿರುವುದರಿಂದಲೂ,

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಯು.ಡಿ.ಡಿ./223/ ಎಂ.ಎನ್.ಯು /2001 ದಿನಾಂಕ: 07-01-2002 ಇದರಲ್ಲಿ ಹೊಸ ಕಟ್ಟಡ ಉಪವಿಧಿಗಳನ್ನು ತಯಾರಿಸಿ ಪ್ರಕಟಿಸಲು ಬೆಂಗಳೂರು ಮಹಾನಗರ ಪಾಲಿಕೆಗೆ ಸರ್ಕಾರವು ಆದೇಶಿಸಿರುವುದರಿಂದಲೂ,

ಹಾಗೂ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1976 (ಕರ್ನಾಟಕ ಅಧಿನಿಯಮ, 1977ರ 14ನೇ ಸಂಖ್ಯೆ) ಇದರ ಪ್ರಕರಣ 295 ಹಾಗೂ 423 ರಲ್ಲಿನ ಅಧಿಕಾರದನ್ವಯ **"ಬೆಂಗಳೂರು ನಗರ ಕಾರ್ಪೋರೇಷನ್ ಕಟ್ಟಡ ಉಪವಿಧಿಗಳು, 1983"** ಇದನ್ನು ಚ್ಯುತಿಪಡಿಸಿ ಅದರ ಸ್ಥಾನದಲ್ಲಿ ಕೆಳಕಂಡ ಕರಡು ಕಟ್ಟಡ ಉಪವಿಧಿಗಳನ್ನು ತಯಾರಿಸಿ ಅಧಿನಿಯಮದ 426ನೇ ಪ್ರಕರಣದ ಉಪವಾಕ್ಯ(ಎ) ಅನ್ವಯ ಸಾರ್ವಜನಿಕರ ಪರಿಶೀಲನೆಗಾಗಿ ಪ್ರಕಟಗೊಳಿಸಿರುತ್ತದೆ.

### ಭಾಗ–I

### ಸಾಮಾನ್ಯ

**1.0. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:**

1.1 ಈ ಉಪವಿಧಿಗಳನ್ನು ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡ ಉಪವಿಧಿಗಳು, 2003 ಎಂದು ಕರೆಯತಕ್ಕದ್ದು.

1.2 ಈ ಉಪವಿಧಿಗಳು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ 1976 ಇದರ ಅಧ್ಯಾಯ II ರನ್ವಯ ಪ್ರಕಟಿಸಿರುವ ಬೆಂಗಳೂರು ಮಹಾನಗರ ಪಾಲಿಕೆ ಅಧಿಕಾರ ವ್ಯಾಪ್ತಿಯೊಳಗೆ ಅನ್ವಯವಾಗತಕ್ಕದ್ದು.

1.3 ಈ ಉಪವಿಧಿಗಳು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1976, ಇದರ ಪ್ರಕರಣ 428ರ ಪ್ರಕಾರ ಕರ್ನಾಟಕ ರಾಜ್ಯ ಪತ್ರದಲ್ಲಿ ಅಂತಿಮವಾಗಿ ಪ್ರಕಟವಾದ ಮೂರು ತಿಂಗಳ ನಂತರ ಜಾರಿಗೆ ಬರತಕ್ಕದ್ದು.

**2.0. ಪರಿಭಾಷೆಗಳು:**

ಈ ಉಪವಿಧಿಗಳಲ್ಲಿ ಸನ್ನಿವೇಶಗಳು ಇತರ ಅರ್ಥಗಳನ್ನು ಕೊಡಲು ಅಗತ್ಯಪಡಿಸದಿದ್ದಲ್ಲಿ, ಈ ಕೆಳಗೆ ನಮೂದಿಸಿರುವ ಪದ ವಿನ್ಯಾಸಗಳು ಅವುಗಳ ಮುಂದೆ ನೀಡಿರುವ ಅರ್ಥಗಳನ್ನು ಕೊಡುತ್ತವೆ.

2.1 **"ಅಧಿನಿಯಮ"(Act)** ಎಂದರೆ, 1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್‌ಗಳ ಅಧಿನಿಯಮ.

2.2 **"ಕೃಷಿ"(Agriculture)** ಎಂಬುದರಲ್ಲಿ, ತೋಟಗಾರಿಕೆ, ಫಾರ್ಮಿಂಗ್, ಬೆಳೆಗಳನ್ನು, ಹಣ್ಣು, ತರಕಾರಿ, ಹೂ, ಹುಲ್ಲು, ಮೇವು, ಮರಗಳನ್ನು ಬೆಳೆಯುವುದು ಅಥವಾ ಮಣ್ಣನ್ನು ಯಾವುದೇ ರೀತಿಯಲ್ಲಿ ಕೃಷಿಮಾಡುವುದು. ದನಗಳು, ಕುದುರೆಗಳು, ಕತ್ತೆ, ಹೇಸರಕತ್ತೆ, ಹಂದಿ, ಮೀನು, ಕೋಳಿ ಮತ್ತು ಜೇನು ಸಾಕುವುದೂ ಸೇರಿದಂತೆ ಜಾನುವಾರು ತಳಿ ಸಂವರ್ಧನೆ ಮತ್ತು ಸಾಕಣೆ ಅಥವಾ ಭೂಮಿಯ ಕೃಷಿಗೆ ಪೂರಕವಾಗಿ ಅಥವಾ ಮೇಲೆ ಹೇಳಿದ ಯಾವುದೇ ಉದ್ದೇಶಕ್ಕಾಗಿ ಬಳಸಲಾಗುವ ಭೂಮಿಯನ್ನು ಒಳಗೊಳ್ಳುತ್ತದೆ. ಆದರೆ ಯಾವುದೇ ಕಟ್ಟಡಕ್ಕೆ ಹೊಂದಿಕೊಂಡಿರುವ ಹಾಗೂ ಕಟ್ಟಡದೊಂದಿಗೆ ಉದ್ಯಾನವನಕ್ಕಾಗಿ ಉಪಯೋಗಿಸುತ್ತಿರುವ ಭೂಮಿಯನ್ನು ಒಳಗೊಳ್ಳುವುದಿಲ್ಲ, ಮತ್ತು **'ಕೃಷಿ'**ಯನ್ನು ಅದರಂತೆ ವ್ಯಾಖ್ಯಾನಿಸತಕ್ಕದ್ದು.

2.3 **"ಮಾರ್ಪಾಡು"(Alteration)** ಎಂದರೆ, ವಿಸ್ತೀರ್ಣವನ್ನು ಅಥವಾ ಎತ್ತರವನ್ನು ಹೆಚ್ಚಿಸುವಂತಹ ಅಥವಾ ಕಟ್ಟಡದ ಯಾವುದೇ ಭಾಗವನ್ನು ತೆಗೆದುಹಾಕುವಂಥ ಕಟ್ಟಡದ ಯಾವುದೇ ಮಾರ್ಪಾಡು, ಕಟ್ಟಡ ನಿರ್ಮಾಣದಲ್ಲಿ ಒಡೆದುಹಾಕುವುದು ಅಥವಾ ಯಾವುದೇ ಗೋಡೆಯನ್ನು, ವಿಭಾಜಕವನ್ನು, ಅಂಕಣವನ್ನು, ತೊಲೆಯನ್ನು, ಜೋಡಣೆಯನ್ನು, ನೆಲೆಗಟ್ಟನ್ನು (ಮಾಳಿಗೆ) ಅಥವಾ ಇತರ ಆಧಾರವನ್ನು ತೆಗೆದುಹಾಕುವುದು ಅಥವಾ ಪ್ರವೇಶ ಮಾರ್ಗ ಅಥವಾ ಹೊರಹೋಗುವ ಮಾರ್ಗವನ್ನು ಬದಲಾಯಿಸುವುದು ಅಥವಾ ಮುಚ್ಚಿ ಬಿಡುವುದು.

2.4 **"ಅಪಾರ್ಟ್‌ಮೆಂಟ್"(Apartment)** ಎಂದರೆ, ಸ್ವತಂತ್ರವಾಗಿ ಯಾವುದೇ ಉಪಯೋಗಕ್ಕಾಗಿ ಉದ್ದೇಶಿಸಲಾದ ಆಸ್ತಿಯ ಒಂದು ಭಾಗ ಮತ್ತು ಸಾರ್ವಜನಿಕ ಬೀದಿ, ಅಥವಾ ರಸ್ತೆ, ಅಥವಾ ಹೆದ್ದಾರಿ ಅಥವಾ ಹೆದ್ದಾರಿಗೆ ಸಂಪರ್ಕ ಕಲ್ಪಿಸುವ ಸಾರ್ವಜನಿಕ ಪ್ರದೇಶಕ್ಕೆ ನೇರ ನಿರ್ಗಮನ ಹೊಂದಿದ, ವಸತಿಗಾಗಿ ಉಪಯೋಗಿಸಲು ಉದ್ದೇಶಿಸಲಾದ ಒಂದು ಅಥವಾ ಹೆಚ್ಚು ಕೋಣೆಗಳನ್ನು ಒಳಗೊಂಡಂತೆ ಅಥವಾ ಒಂದು ಕಟ್ಟಡದಲ್ಲಿ ಒಂದು ಅಥವಾ ಹೆಚ್ಚಿನ ಮಹಡಿಗಳಲ್ಲಿರುವ ಅಥವಾ ಅವುಗಳ ಭಾಗಶಃ ಅಥವಾ ಭಾಗಗಳ ಆವೃತವಾದ ಪ್ರದೇಶ.

2.5 **"ಅಪಾರ್ಟ್‌ಮೆಂಟ್ ಬಿಲ್ಡಿಂಗ್ / ಬಹುವಸತಿ ಘಟಕಗಳು" (Apartment / Multi dwelling Units)** ಎಂದರೆ, ನಾಲ್ಕು ಅಥವಾ ಹೆಚ್ಚು ಕೋಣೆಗಳನ್ನು / ವಸತಿ ಘಟಕಗಳನ್ನು ಹೊಂದಿದ, ಒಂದು ಕಟ್ಟಡ, ಅಥವಾ ಎರಡು ಅಥವಾ ಹೆಚ್ಚು ಕಟ್ಟಡಗಳು ಪ್ರತಿಯೊಂದು ಎರಡು ಅಥವಾ ಹೆಚ್ಚು ಕೋಣೆಗಳನ್ನು / ವಸತಿ ಘಟಕಗಳನ್ನು ಹೊಂದಿದ ಒಟ್ಟು ನಾಲ್ಕು ಅಥವಾ ಹೆಚ್ಚು ಕೋಣೆಗಳನ್ನು / ವಸತಿ ಘಟಕಗಳನ್ನು ಹೊಂದಿದ ಪೂರ್ಣ ಅಥವಾ ಭಾಗಶಃ ಆಸ್ತಿಯನ್ನು ಒಳಗೊಂಡಂತೆ ಇಂಥ ಎಲ್ಲಾ ಕಟ್ಟಡಗಳು.

2.6 **"ಅರ್ಜಿದಾರ" (Applicant)** ಎಂದರೆ ಹಾಗೂ ಆ ಪದದಲ್ಲಿ ಕಟ್ಟಡವನ್ನು ರಚಿಸುವ ಅಥವಾ ಪುನಃ ರಚಿಸುವ ಅಥವಾ ಮಾರ್ಪಾಡು ಮಾಡುವ ತನ್ನ ಆಶಯವನ್ನು ಪ್ರಾಧಿಕಾರಿಗೆ ತಿಳಿಸುವ ನೋಟೀಸನ್ನು ಕೊಡುವ ಯಾವುದೇ ವ್ಯಕ್ತಿ.

2.7 **"ಪ್ರಾಧಿಕಾರ"(Authority)** ಎಂದರೆ, ಕಟ್ಟಡಗಳ ನಿರ್ಮಾಣಕ್ಕೆ ಮಂಜೂರಾತಿ ನೀಡಲು ಬೆಂಗಳೂರು ನಗರ ಕಾರ್ಪೊರೇಷನ್ ಆಯುಕ್ತರು ಅಥವಾ ಆಯುಕ್ತರಿಂದ ಕಟ್ಟಡಗಳಿಗೆ ಮಂಜೂರಾತಿಗಳನ್ನು ನೀಡಲು ಪ್ರತ್ಯಾಯೋಜಿಸಲ್ಪಟ್ಟಿರುವ ಒಬ್ಬ ಅಧಿಕಾರಿ.

2.8 **"ಬಾಲ್ಕನಿ"(Balcony)**ಎಂದರೆ, ದಾರಿ ಅಥವಾ ಕುಳಿತುಕೊಳ್ಳಲು ಉಪಯೋಗವಾಗುವ ಕೈಕಂಬ ಅಥವಾ ಕಟಾಂಜನವನ್ನು ಒಳಗೊಂಡಿರುವ ಚಾಚು ರಚನೆ.

2.9 **"ತಳ ಅಂತಸ್ತು ಅಥವಾ ಸೆಲ್ಲರ್"(Basement Storey or Cellar)** ಎಂದರೆ, ಭೂಮಿಯ ಮಟ್ಟದಿಂದ, ಭಾಗಶಃ ಅಥವಾ ಪೂರ್ಣವಾಗಿ ಕೆಳಗಿರುವ ಯಾವುದೇ ಅಂತಸ್ತು. ತಳ ಮನೆಯು ಸರಾಸರಿ ಭೂಮಿಯ ಕೆಳಮಟ್ಟದಿಂದ ಒಂದು ಮೀಟರ್‌ಗಿಂತ ಹೆಚ್ಚಾಗಿ ಚಾಚತಕ್ಕದ್ದಲ್ಲ.

2.10 **"ಕಟ್ಟಡ"ವು, (Building)**

ಎ) ಮನೆ, ಹೊರ ಮನೆ(ಔಟ್ ಹೌಸ್), ಕೊಟ್ಟಿಗೆ, ಶೌಚಗೃಹ, ಷೆಡ್ಡು, ಗುಡಿಸಲು, ಬಾವಿ, ವರಾಂಡ, ಕಟ್ಟೆ, ಪೀಠ, ಬಾಗಿಲಿಗೆ ಹೊಂದಿಕೊಂಡಿರುವ ಮೆಟ್ಟಲು, ಮತ್ತು ಗಾರೆಯ, ಇಟ್ಟಿಗೆಯ, ಮರದ, ಮಣ್ಣಿನ, ಲೋಹದ ಅಥವಾ ಇತರ ಯಾವುದೇ ಬಗೆಯ ಅಂಥ ರಚನೆಯನ್ನು;

ಬಿ) ತಳಪಾಯವಿಲ್ಲದೆ, ನೆಲದ ಮೇಲೆ ಚಕ್ರಗಳ ಆಧಾರದ ಮೇಲೆ ನಿಂತಿರುವ ರಚನೆಯನ್ನು;

ಸಿ) ಮನುಷ್ಯರ ವಾಸಕ್ಕಾಗಿ ಬಳಸಲಾಗುವ ಅಥವಾ ಪ್ರಾಣಿಗಳನ್ನು ಪೋಷಿಸಲು ಅಥವಾ ವಸ್ತುಗಳನ್ನು ಸರಕುಗಳನ್ನು ದಾಸ್ತಾನು ಮಾಡಲು ಬಳಸಲಾಗುವ ಹಡಗು, ನಾವೆ, ದೋಣಿ, ಡೇರೆ ಮತ್ತು ಯಾವುದೇ ರಚನೆಯನ್ನು;

- ಒಳಗೊಳ್ಳುತ್ತದೆ.

2.11 **"ಕಟ್ಟಡಗಳ ಸಾಲು ರೇಖೆ" (Building Line)**ಎಂದರೆ, ಕಾನೂನು ಬದ್ಧವಾಗಿ ಕಟ್ಟಡಗಳ ಮೇಲ್ಪಾಯ (ಪ್ಲಿಂತ್) ವನ್ನು ರಸ್ತೆ ಅಥವಾ ವಿಸ್ತರಿಸಿದ ರಸ್ತೆಯವರೆಗೆ ಬದಲಾಯಿಸಬಹುದಾದ ರೇಖೆ ಮತ್ತು ಯಾವುದೇ ಯೋಜನೆಯ ಅಡಿಯಲ್ಲಿ ನಿಗದಿಪಡಿಸಿರುವ ರೇಖೆಯನ್ನು ಒಳಗೊಳ್ಳುತ್ತದೆ.

2.12 **"ಚಜ್ಜಾ"(Chajja)**ಎಂದರೆ, ಬಿಸಿಲು ಮತ್ತು ಮಳೆಯಿಂದ ರಕ್ಷಣೆ ಒದಗಿಸಲು ಖಾಲಿಜಾಗ ಅಥವಾ ಹೊರ ಗೋಡೆಗೆ ಅಳವಡಿಸಿರುವ ಅವಿಚ್ಛಿನ್ನ ಇಳಿಜಾರು ಅಥವಾ ಸಮತಲವಾದ ಚಾಚು ರಚನೆ.

2.13 **"ಹೊಗೆಗಿಂಡಿ"(Chimney)**ಎಂದರೆ, ಕುಲುಮೆಯ ಹೊಗೆ, ಅನಿಲ, ಇತ್ಯಾದಿಗಳನ್ನು ಸಾಗಿಸುವುದಕ್ಕೆ ಮತ್ತು ನುಗ್ಗು ಗಾಳಿ ಸೃಜನೆಗೆ ಆಸ್ಪದವಾಗಿರುವ ಸಾಮಾನ್ಯವಾಗಿ ಭೂಮಿಗೆ ಲಂಬವಾಗಿ ಇರುವ ದಾರಿ ಅಥವಾ ಕೊಳವೆಯಿಂದ ಮಾಡಿದ ರಚನೆ.

2.14 **"ವಾಣಿಜ್ಯ ಕಟ್ಟಡ" (Commercial Building)** ಎಂದರೆ ಮಾರಾಟದ ಸರಕುಗಳನ್ನು ಪ್ರದರ್ಶನಕ್ಕಾಗಿ ಇಡಲು ಮತ್ತು ಅವುಗಳನ್ನು ಸಗಟಾಗಿ ಅಥವಾ ಚಿಲ್ಲರೆಯಾಗಿ ಮಾರಾಟ ಮಾಡುವುದಕ್ಕಾಗಿ ಅಂಗಡಿಗಳಂತೆ, ಮಾರುಕಟ್ಟೆಗಳಂತೆ ಉಪಯೋಗಿಸುವ ಯಾವುದೇ ಕಟ್ಟಡ ಅಥವಾ ಕಟ್ಟಡದ ಯಾವುದೇ ಭಾಗ, ಉದ್ಯಮ ವ್ಯವಹಾರಕ್ಕಾಗಿ ಉಪಯೋಗಿಸುವ ಅಥವಾ ಅದೇ ಬಗೆಯ ಉದ್ದೇಶಗಳಿಗೆ ಅಂದರೆ, ಲೆಕ್ಕಪತ್ರ ದಾಖಲೆಗಳನ್ನು ಇಡುವುದಕ್ಕಾಗಿ ಉಪಯೋಗಿಸುವ ಕಟ್ಟಡ ಸೇರತಕ್ಕದ್ದು. ವಿನಾಯಿತಿ ನೀಡದೆ ಇರುವ, ವೃತ್ತಿ ಸೇವಾ ಸೌಲಭ್ಯಗಳನ್ನು ನೀಡುವ ಕಟ್ಟಡ ಕಾರ್ಪೋರೇಟ್ ಕಛೇರಿಗಳು, ಸಾಫ್ಟ್‌ವೇರ್ ಸೇವೆಗಳು, ಮಾನ್ಯತೆ ಪಡೆದ ವಾಣಿಜ್ಯ ಕಛೇರಿಗಳು ಮತ್ತು ಅಂಗ ಸಂಸ್ಥೆಗಳು, ಪೆಟ್ರೋಲ್ ಬಂಕ್, ರೆಸ್ಟೋರೆಂಟ್‌ಗಳು, ವಸತಿ ಗೃಹಗಳು, ನರ್ಸಿಂಗ್ ಹೋಮ್‌ಗಳು, ಸಿನಿಮಾ ಮಂದಿರಗಳು, ಬ್ಯಾಂಕ್‌ಗಳು, ವ್ಯಾಪಾರ ದೃಷ್ಟಿಯಿಂದ ನಡೆಸುವ ಕ್ಲಬ್‌ಗಳು. ಮಾರಾಟ ಸರಕುಗಳನ್ನು ಸಂಗ್ರಹಿಸಿಡುವ ಮತ್ತು ಮಾರಟಕ್ಕೆ ಪೂರಕವಾಗಿರುವ ಸೇವಾ ಸೌಲಭ್ಯಗಳನ್ನು ನೀಡುವ ಹಾಗೂ ಅದೇ ಕಟ್ಟಡದಲ್ಲಿ ಇರುವ ಸಂಗ್ರಹಣಾಗಾರ. ಇವುಗಳು ಈ ಗುಂಪಿನಲ್ಲಿ ಒಳಗೊಳ್ಳತಕ್ಕದ್ದು.

2.15 **"ಸಾಮಾನ್ಯ ಗೋಡೆ" (Common Wall)** ಎಂದರೆ :

ಎ) ಅಕ್ಕಪಕ್ಕದ ಇಬ್ಬರು ಮಾಲೀಕರಿಗೆ ಸೇರಿದ ಭೂಮಿಯ ಮೇಲೆ ಕಟ್ಟಿರುವ ಗೋಡೆ, ಆ ಗೋಡೆಯು ಇಬ್ಬರು ಮಾಲೀಕರ ಜಂಟೀ ಸ್ವತ್ತು.

ಬಿ) ಅಕ್ಕಪಕ್ಕದ ಮಾಲೀಕರು, ತಮ್ಮ ಸ್ವತ್ತಿನಲ್ಲಿ ಪ್ರತಿಯೊಬ್ಬರು ವಿಭಾಜಕ ಗೋಡೆಯನ್ನು ಕಟ್ಟಿದರೆ, ಅದು ಸಾಮಾನ್ಯ ಗೋಡೆಯಾಗಿರುವುದಿಲ್ಲ. ಮತ್ತು ಆ ಮಾಲೀಕರ ನಡುವೆ ಕಾನೂನು ಬದ್ಧ ಒಪ್ಪಂದವಾಗಿರದ ಹೊರತು, ಯಾವುದೇ ಗೋಡೆಯ ಯಾವ ಭಾಗವೂ ಪಕ್ಕದ ಮಾಲೀಕರ ಭೂಮಿಯ ಮೇಲೆ ಚಾಚಿಕೊಂಡಿರತಕ್ಕದಲ್ಲ.

ಸಿ) ಅಂಥ ಸಾಮಾನ್ಯ ಅಥವಾ ವಿಭಾಜಕ ಗೋಡೆಯನ್ನು ಈ ಉಪವಿಧಿಗಳ ಉದ್ದೇಶಕ್ಕಾಗಿ ಅವುಗಳ ದಪ್ಪ ಮತ್ತು ಎತ್ತರಗಳಿಗೆ ಸಂಬಂಧಿಸಿದಂತೆ, ಹೊರ ಗೋಡೆಗೆ ಸಮಾನವೆಂಬಂತೆ ಪರಿಗಣಿಸತಕ್ಕದ್ದು.

2.16 **"ಮೂಲೆ ನಿವೇಶನ" (Corner Plot)** ಎಂದರೆ ಎರಡು ಅಥವಾ ಹೆಚ್ಚು ಕೂಡು ರಸ್ತೆಗಳಿಗೆ ಎದುರಾಗಿರುವ ನಿವೇಶನ.

2.17 **"ಮಹಾನಗರ ಪಾಲಿಕೆ"(Corporation)** ಎಂದರೆ ಅಧಿನಿಯಮದ ಅಡಿಯಲ್ಲಿ ರಚಿತವಾಗಿರುವ ಹಾಗೂ ಬೆಂಗಳೂರು ಮಹಾನಗರ ಪಾಲಿಕೆ ಎಂದು ಕರೆಯಲ್ಪಡುವ ಬೆಂಗಳೂರು ಮಹಾನಗರ ಪಾಲಿಕೆ.

2.18 **"ಅಂಗಳ"(Court Yard)** ಎಂದರೆ ಕಟ್ಟಡಗಳು, ಎಲ್ಲೆಯ ಗೋಡೆಗಳು ಅಥವಾ ಕಟಕಟೆಗಳಿಂದಾವೃತವಾದ ಅಥವಾ ಭಾಗಶಃ ಆವೃತವಾದ ಬಯಲು ಜಾಗ. ಅದು ನೆಲ ಅಂತಸ್ತು ಮಟ್ಟ ಅಥವಾ ಕಟ್ಟಡಗಳ ಒಳಗಿನ ಅಥವಾ ಹೊಂದಿಕೊಂಡ ಯಾವುದೇ ಇತರ ಮಟ್ಟದಲ್ಲಿರಬಹುದು.

2.19 **"ಆವೃತ ಪ್ರದೇಶ ವಿಸ್ತೀರ್ಣ"(Covered Area)** ಎಂದರೆ, ಮೇಲ್ಪಾಯದ ನಿಕಟ ಪೂರ್ವದ ಕಟ್ಟಡ/ ಕಟ್ಟಡಗಳಿಂದ ಆವರಿಸಲ್ಪಟ್ಟ ಪ್ರದೇಶ.

ಎ) ನೆಲ ಮಟ್ಟದಲ್ಲಿರುವ ಅಂಗಳ, ಉದ್ಯಾನವನ, ಕಲ್ಲುಬಂಡೆ ಪ್ರದೇಶ, ಬಾವಿ ಮತ್ತು ಬಾವಿ ಕಟ್ಟಡಗಳು, ಗಿಡ, ಸಸ್ಯೋಪಾನ, ಈಜುಕೊಳ (ಅನಾವೃತವಾಗಿದ್ದರೆ), ಮರದ ಸುತ್ತಲಿನ ಕಟ್ಟೆ, ನೀರಿನ ತೊಟ್ಟಿ, ನೀರಿನ ಚಿಲುಮೆ, ತೆರೆದ ಬೆಂಚು ಮತ್ತು ಆವೃತವಾಗದ ಗೋಡೆಗಳ ಭಾಗಗಳು ಹಾಗೂ ಇದೇ ರೀತಿಯವು;

ಬಿ) ಒಳಚರಂಡಿ, ಅಡಿಗಾಲುವೆ, ಕೊಳಾಯಿ, ನೀರಿನ ಗುಂಡಿ, ಮೋರಿ, ಮೂತ್ರದ ಚರಂಡಿ ಹಾಗೂ ಇದೇ ರೀತಿಯವು;

ಸಿ) ಕಾಂಪೌಂಡ್ ಅಥವಾ ಆವರಣ ಗೋಡೆ, ಗೇಟು, ಅಂತಸ್ತುಗಳಿಲ್ಲದ ದ್ವಾರ ಮಂಟಪ(ಪೋರ್ಚ್) ಮತ್ತು ಪೋರ್ಟಿಕೋ, ಚಜ್ಜಾ, ಜಾರುಬಂಡೆ, ತೂಗುಯ್ಯಾಲೆ, ಆವರಿಸಲ್ಪಡದ ಮಹಡಿ ಮೆಟ್ಟಲು, ಕಾವಲುಗಾರನ ಸಣ್ಣ ಕೋಣೆ, ಪಂಪ್‌ಹೌಸ್‌ಗಳ ಕ್ಷೇತವು ಮೂರು ಚದರ ಮೀಟರಿಗಿಂತಲು ಹೆಚ್ಚಿರತಕ್ಕದ್ದಲ್ಲ ಮತ್ತು

ಡಿ) ಸಂಪ್‌ಟ್ಯಾಂಕ್ ಮತ್ತು ವಿದ್ಯುತ್ ಟ್ರಾನ್ಸ್‌ಫಾರ್ಮರ್, ಇವುಗಳು ಒಳಗೊಂಡಿರುವುದಿಲ್ಲ.

2.20 **"ಅಡ್ಡಗೋಡೆ"(Cross Wall)** ಎಂದರೆ ಚಾವಣಿ ಅಥವಾ ಹಾಸುಗಲ್ಲಿನವರೆಗಿನ ಕಟ್ಟಡದ ಒಳಗಿನ ಒಳಗೋಡೆ.

2.21 **"ಸಾಂದ್ರತೆ"(Density)**ಎಂದರೆ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಒಂದು ಹೆಕ್ಟೇರ್ ಕ್ಷೇತ್ರದಲ್ಲಿ ಕ್ರೋಡಿಕರಿಸಲ್ಪಟ್ಟಿರುವ ಜನಗಳ ಸಂಖ್ಯೆ.

2.22 **"ಪ್ರತ್ಯೇಕ ಕಟ್ಟಡ"(Detached Building)** ಎಂದರೆ ಗ್ಯಾರೇಜ್‌ನ್ನು ಆವರಿಸಿದ ಭಾಗವನ್ನು ಹೊರತು ಪಡಿಸಿ ಯಾವುದೇ ಇತರ ಕಟ್ಟಡಗಳೊಂದಿಗೆ ಸೇರಿರದ ಸ್ವತಂತ್ರವಾದ ಗೋಡೆಗಳು ಮತ್ತು ಚಾವಣಿಗಳನ್ನು ಹೊಂದಿರುವ ಮತ್ತು ಎಲ್ಲಾ ಬದಿಗಳಲ್ಲೂ ಖಾಲಿ ಜಾಗ ಹೊಂದಿರುವ ಒಂದು ಕಟ್ಟಡ.

2.23 **"ಅಭಿವೃದ್ಧಿ"(Development)** ಈ ಪದದ ವ್ಯಾಕರಣದ ವ್ಯತ್ಯಾಸಗಳೊಂದಿಗೆ ಅಭಿವೃದ್ಧಿ ಎಂದರೆ, ಭೂಮಿಯ ಮೇಲೆ, ಕೆಳಗೆ ಅಥವಾ ಒಳಗೆ ಕಟ್ಟಡ ನಿರ್ಮಿಸುವುದು, ರಚಿಸುವುದು, ಗಣಿ ತೋಡುವುದು ಅಥವಾ ಇತರ ಕಾರ್ಯಾಚರಣೆಗಳು ಅಥವಾ ಯಾವುದೇ ಕಟ್ಟಡದ ಅಥವಾ ಭೂಮಿಯ ಉಪಯೋಗದಲ್ಲಿ ಮಾಡುವ ಯಾವುದೇ ಗಣನಾರ್ಹ ಬದಲಾವಣೆ ಮತ್ತು ಇದರಲ್ಲಿ ಯಾವುದೇ ಭೂಮಿಯ ಉಪವಿಭಜನೆಯೂ ಒಳಗೊಳ್ಳುತ್ತದೆ.

2.24 **"ಅಭಿವೃದ್ಧಿ ಯೋಜನೆ" (Development Plan)** ಎಂದರೆ, 1961 ರ ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮದ ಮೇರೆಗೆ ಸರ್ಕಾರದಿಂದ ಅನುಮೋದನೆ ಗೊಂಡಿರುವ ಸ್ಥೂಲಾಭಿವೃದ್ಧಿಯೋಜನೆ ಅಥವಾ ವ್ಯಾಪಕಾಭಿವೃದ್ಧಿ ಯೋಜನೆ ಅಥವಾ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆ.

2.25 **"ಚರಂಡಿ"(Drain)** ಎಂದರೆ, ಒಳ ಚರಂಡಿ ವ್ಯವಸ್ಥೆಗೆ ಜೋಡಣೆ ಯಾಗುವ ಕಟ್ಟಡದ ನೀರು ಅಥವಾ ನಿರುಪಯುಕ್ತ ನೀರನ್ನು ಸಾಗಿಸುವ, ಪೈಪುಗಳ ಜೋಡಣೆ, ಕವಾಟಗಳು, ಚರಂಡಿಗಳು ಮತ್ತು ಮಹಡಿ ಕವಾಟಗಳು.

2.26 **"ಒಳಚರಂಡಿ ವ್ಯವಸ್ಥೆ" (Drainage)** ಎಂದರೆ, ಯಾವುದೇ ನಿರುಪಯುಕ್ತ ದ್ರವವನ್ನು ಹೊರಸಾಗಿಸುವ ಉದ್ದೇಶಕ್ಕಾಗಿ ನಿರ್ಮಿಸಲಾಗಿರುವ ವ್ಯವಸ್ಥೆ.

2.27 **"ನಿವಾಸದ ಘಟಕಗಳು"(Dwelling Unit/Tenament)** ಎಂದರೆ, ಜೀವಿಸುವ, ಅಡುಗೆ ಮಾಡುವ ಮತ್ತು ಶೌಚದ ಅಗತ್ಯಗಳಂಥ ಸೌಲಭ್ಯಗಳನ್ನು ಪ್ರತ್ಯೇಕವಾಗಿ ಹೊಂದಿರುವ ಸ್ವತಂತ್ರ ವಸತಿ.

2.28 **"ಹೊರ ಮಾರ್ಗ" (Exit)** ಎಂದರೆ, ಯಾವುದೇ ಅಂತಸ್ತಿನಿಂದ ಬೀದಿಗೆ ಅಥವಾ ಇತರ ಸುರಕ್ಷಿತ ಪ್ರದೇಶಕ್ಕೆ ದಾರಿ, ಮಾರ್ಗ ಅಥವಾ ಹೊರಹೋಗುವ ಸಾಧನ.

2.29 **"ಹೊರ ಗೋಡೆ" (External Wall)** ಎಂದರೆ, ಮತ್ತೊಂದು ಕಟ್ಟಡದ ಗೋಡೆಗೆ ಹೊಂದಿಕೊಂಡಿದ್ದರೂ ಅಡ್ಡಗೋಡೆಯಾಗಿರದೆ ಇರುವ ಮತ್ತು ಕಟ್ಟಡದ ನಡುಜಾಗಕ್ಕೆ ಹೊಂದಿಕೊಂಡಿರುವ ಒಂದು ಗೋಡೆ.

2.30 **"ಮೊದಲನೆಯ ಅಂತಸ್ತು" (First Floor)** ಎಂದರೆ, ನೆಲಅಂತಸ್ತಿನ ಮೇಲಿನ ಒಂದನೇ ಅಂತಸ್ತು ಮತ್ತು ಯಾವ ಅಂತಸ್ತಿನ ಮೇಲೆ ಎರಡನೆಯ ಹಾಗೂ ಇತರ ಅಂತಸ್ತುಗಳನ್ನು ಒಂದರ ಮೇಲೊಂದರಂತೆ ಕಟ್ಟಲಾಗಿರುವುದೋ ಆ ಅಂತಸ್ತು.

2.31 **"ಮಹಡಿಗಳನ್ನುಳ್ಳ ಕಾರ್ಖಾನೆ" (Flatted Factory)** ಎಂದರೆ, ಅನುಸೂಚಿ 1ಎ ಮತ್ತು 1ಬಿ ಗಳಲ್ಲಿ ನಮೂದಿಸಿರುವ 50 ಕಾರ್ಮಿಕರಿಗಿಂತಲೂ ಹೆಚ್ಚಿಲ್ಲದ ಹಾಗೂ ಅಪಾಯಕಾರಕವಾಗದೆ ಇರುವ ಸಣ್ಣ ಪ್ರಮಾಣದ ಕೈಗಾರಿಕೆ ಘಟಕಗಳ ಆವರಣ. ಈಘಟಕಗಳನ್ನು ಬಹುಮಹಡಿ ಕಟ್ಟಡದಲ್ಲಿ ಸ್ಥಾಪಿಸಬಹುದು.

2.32 **"ಅಂತಸ್ತು" (Floor)** ಎಂದರೆ, ಕಟ್ಟಡದಲ್ಲಿ ಸಾಮಾನ್ಯವಾಗಿ ವ್ಯಕ್ತಿಗಳು ಅಡ್ಡಾಡುವ ಮಹಡಿಯಲ್ಲಿನ ಕೆಳಗಿನ ಭಾಗ. ಸಾಮಾನ್ಯ ಪದ "ಅಂತಸ್ತು" ಎಂಬುದನ್ನು ಅನ್ಯಥಾ ವಿಶೇಷವಾಗಿ ಹೆಸರಿಸುವ ಹೊರತು ಮೆಜನೈನ್ ಉಲ್ಲೇಖಿಸತಕ್ಕದ್ದಲ್ಲ.

2.33 **"ಅಂತಸ್ತು ವಿಸ್ತೀರ್ಣ ಅನುಪಾತ" (Floor Area Ratio)** ಎಂದರೆ, ಎಲ್ಲ ಅಂತಸ್ತುಗಳ ಒಟ್ಟು ಆವೃತ ವಿಸ್ತೀರ್ಣವನ್ನು ನಿವೇಶನದ ವಿಸ್ತೀರ್ಣದಿಂದ ಭಾಗಿಸುವುದರಿಂದ ಬರುವ ಭಾಗಲಬ್ಧ. ಅಂತಸ್ತು ವಿಸ್ತೀರ್ಣವು ಮೆಜೆನೈನ್ ಅಂತಸ್ತು ವಿಸ್ತೀರ್ಣವನ್ನು ಒಳಗೊಳ್ಳುತ್ತದೆ.

$$\text{ಅಂತಸ್ತು ವಿಸ್ತೀರ್ಣ ಅನುಪಾತ} = \frac{\text{ಎಲ್ಲಾ ಅಂತಸ್ತುಗಳ ಒಟ್ಟು ಆವೃತ ವಿಸ್ತೀರ್ಣ}}{\text{ನಿವೇಶನದ ಒಟ್ಟು ವಿಸ್ತೀರ್ಣ}}$$

2.34 **"ಅಡಿವರಸೆ" (Footing)**ಎಂದರೆ, ಹೆಚ್ಚು ಪ್ರದೇಶದಲ್ಲಿ ಭಾರವನ್ನು ಹೊರಲು ಗೋಡೆಯ ತಳದಲ್ಲಿ ಮಾಡಿದ ಗೋಡೆಯಿಂದ ಹೊರಚಾಚಿದ ವರಸೆ.

2.35 **"ಅಡಿಪಾಯ"(Foundation)** ಎಂದರೆ, ಅತ್ಯಂತ ಕೆಳಗಿನ ಮಹಡಿಯ ಕೆಳಗಿರುವ ಮತ್ತು ಮೇಲ್ಕಟ್ಟಡಕ್ಕೆ ಆಧಾರವಾಗಿರುವ ಹಾಗೂ ಮೇಲ್ಕಟ್ಟಡದ ಭಾರವನ್ನು ಆಧಾರ ಸ್ತರಗಳಿಗೆ ವರ್ಗಾಯಿಸುವ ಭಾಗ.

2.36 **"ನಿವೇಶನದ ಮುಂಭಾಗ"(Frontage)** ಎಂದರೆ, ರಸ್ತೆಗೆ ಹೊಂದಿ ಕೊಂಡಿರುವ ಯಾವುದೇ ನಿವೇಶನದ ಭಾಗದ ಅಳತೆ.

2.37 **"ಗ್ಯಾರೇಜ್"(Garage)** ಎಂದರೆ, ವಾಹನಗಳನ್ನು ನಿಲ್ಲಿಸುವುದಕ್ಕಾಗಿ ಬಳಸುವ ಅಥವಾ ಅದಕ್ಕಾಗಿ ರಚಿಸಿದ ಒಂದು ಕಟ್ಟಡದ ರಚನೆ.

2.38 **"ಸರ್ಕಾರ"(Government)** ಎಂದರೆ, ಕರ್ನಾಟಕ ಸರ್ಕಾರ.

2.39 **"ನೆಲ ಅಂತಸ್ತು"(Ground Floor)** ಎಂದರೆ, ಎಲ್ಲಾ ಕಡೆಯಿಂದಲು ಭೂಮಿಗೆ ಹೊಂದಿಕೊಂಡಿದ್ದು ಅದಕ್ಕೆ ಅತಿ ಹತ್ತಿರವಿರುವ ಅಂತಸ್ತು ಅಥವಾ ನೆಲಮಾಳಿಗೆಯ ಮೇಲಿರುವ ಅಂತಸ್ತು.

2.40 **"ಸಮೂಹ ವಸತಿ" (Group Housing)** ಎಂದರೆ, ಒಂದು ಅಥವಾ ಪ್ರತಿಯೊಂದು ಅಂತಸ್ತಿನಲ್ಲಿ ಒಂದು ಅಥವಾ ಹೆಚ್ಚಿನ ವಾಸದ ಘಟಕಗಳ ಒಂದು ಪ್ಲಾಟ್‌ನಲ್ಲಿ ಎರಡಕ್ಕಿಂತ ಹೆಚ್ಚು ಕಟ್ಟಡಗಳನ್ನು ನಿರ್ಮಿಸಿರುವುದು. ಈಗಿರುವ ರಸ್ತೆಗಳಿಂದ ಅವುಗಳಿಗೆ ನೇರವಾದ ದಾರಿ ಇಲ್ಲದಿದ್ದಲ್ಲಿ 3.50 ಮೀಟರ್‌ಗಳಿಗಿಂತ ಕಡಿಮೆ ಇರದ ರಸ್ತೆಯ ಮೂಲಕ ಅವುಗಳಿಗೆ ಸಂಪರ್ಕ ಕಲ್ಪಿಸುವುದು.

2.41 **"ವಾಸಯೋಗ್ಯ ಕೊಠಡಿ" (Habitable Room)**ಎಂದರೆ, ಒಂದು ಅಥವಾ ಅದಕ್ಕಿಂತ ಹೆಚ್ಚು ಜನರು ವ್ಯಾಸಂಗ, ವಾಸ, ಮಲಗುವ, ಅಡುಗೆ ಮಾಡುವ, ಊಟ ಮಾಡುವ ಉದ್ದೇಶಗಳಿಗಾಗಿ ಉಪಯೋಗಿಸುವ ಕೊಠಡಿ. ಆದರೆ ಸಾಧಾರಣವಾಗಿ ಅಥವಾ ಇತರೆ ಸಂದರ್ಭಗಳಲ್ಲಿ ವಾಸಕ್ಕಾಗಿ ಉಪಯೋಗಿಸಲ್ಪಡದ ಸ್ನಾನದ ಕೋಣೆಗಳು, ಶೌಚಗೃಹಗಳು, ದೋಬಿಖಾನೆಗಳು, ಭೋಜನ ವಸ್ತುಗಳನ್ನು ವಿತರಣೆ ಮಾಡುವ, ಸಂಗ್ರಹಿಸುವ ಕೊಠಡಿ, ಮೊಗಸಾಲೆ, ತಳಅಂತಸ್ತು, ಅಟ್ಟಗಳು, ವಾಸಯೋಗ್ಯ ಕೊಠಡಿಗಳಲ್ಲಿ ಒಳಪಡುವುದಿಲ್ಲ.

2.42 **"ಅಪಾಯಕಾರಿ ಕಟ್ಟಡಗಳು" (Hazardous Buildings)** ಎಂದರೆ, ಹೆಚ್ಚು ತೀವ್ರವಾಗಿ ಉರಿಯುವಂತೆ ಮಾಡುವ ಮತ್ತು ವಿಷಕಾರಿ ಹೊಗೆ ಅಥವಾ ಸ್ಫೋಟವನ್ನುಂಟು ಮಾಡಬಹುದಾಗಿದ್ದು ಹೆಚ್ಚು ಉರಿಯುವ (ದಾಹ್ಯ) ಶಕ್ತಿಯುಳ್ಳ ವಸ್ತುಗಳನ್ನು ಅಥವಾ ಸ್ಫೋಟಕ ವಸ್ತುಗಳನ್ನು ಅಥವಾ ಉತ್ಪನ್ನಗಳನ್ನು ಸಂಗ್ರಹಿಸಿಡುವ, ನಿರ್ವಹಿಸುವ, ತಯಾರಿಸುವ ಅಥವಾ ಸಂಸ್ಕರಿಸುವುದಕ್ಕಾಗಿ ಉಪಯೋಗಿಸುವ ಕಟ್ಟಡ ಅಥವಾ ಅದರ ಭಾಗ ಸೇರುತ್ತದೆ. ತೀವ್ರ ವಿಷಕಾರಿ ಅನಿಲಗಳನ್ನು ಒಳಗೊಂಡಿರುವ ವಸ್ತುಗಳನ್ನು ಸಂಗ್ರಹಿಸಿಡುವ, ಬಳಸುವ, ತಯಾರಿಸುವ ಅಥವಾ ಸಂಸ್ಕರಿಸುವ ಮತ್ತು ಧೂಳಾದ ಸ್ಫೋಟಕ ಸಂಯುಕ್ತಗಳನ್ನು ತಯಾರಿಸುವ ಅಥವಾ ವಸ್ತು ಕಣ ಕಣಗಳಾಗಿ ಅವ್ಯಾಹತವಾಗಿ ಅನಿಲ ಮಿಶ್ರಣವನ್ನು ಹೊತ್ತಿಸುವ ಯಾವುದೇ ವಸ್ತುಗಳನ್ನು ಸಂಗ್ರಹಿಸಿಡುವ, ನಿರ್ವಹಿಸುವ ಅಥವಾ ಸಂಸ್ಕರಿಸುವುದಕ್ಕಾಗಿ ಉಪಯೋಗಿಸುವ ಯಾವುದೇ ಕಟ್ಟಡ ಅಥವಾ ಕಟ್ಟಡದ ಭಾಗ ಸೇರತಕ್ಕದ್ದು.

2.43 **"ಮೇಲು ಕೊಠಡಿ" (Head Room)** ಅಂತಿಮವಾಗಿ ಓರಣ ಮಾಡಿದ ಮಾಳಿಗೆಗೆ ಅವಕಾಶ ಕಲ್ಪಿಸಿರದಿದ್ದಲ್ಲಿ ಸೇರಿಕೆ; ಸಂದು ಅಥವಾ ತೊಲೆಗಳು ಅಥವಾ ತೊಲೆಗಳನ್ನು ಕಟ್ಟಿರುವ ಕೆಳಭಾಗದ ಆಧಾರದ ಮೇಲೆ, ಮೇಲಿನ ಕೊಠಡಿಯ ಬಗ್ಗೆ ಸರಿಯಾಗಿ ಅಳತೆ ಮಾಡತಕ್ಕದ್ದು.

2.44 **"ಭಾರಿ ಕೈಗಾರಿಕೆ" (Heavy Industry)**ಎಂದರೆ, **500** ಸಂಖ್ಯೆಗಿಂತಲೂ ಹೆಚ್ಚು ಕೆಲಸಗಾರರನ್ನು ನೇಮಿಸಿಕೊಂಡಿರುವ ಒಂದು ಕೈಗಾರಿಕೆ. ಈ ಕೈಗಾರಿಕೆಗಳಿಗೆ ಸರ್ಕಾರದಿಂದ ಅನುಮೋದಿಸಲ್ಪಟ್ಟ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆ ಅನುಗುಣವಾಗಿ ಅನುಮತಿಸ ಬಹುದು.

2.45 **"ಕಟ್ಟಡದ ಎತ್ತರ" (Height of Building)** ಎಂದರೆ ಸಮತಲ ಛಾವಣಿಗಳಿಗೆ ಸಂಬಂಧಿಸಿದಂತೆ ನಿವೇಶನಕ್ಕೆ ಹೊಂದಿಕೊಂಡಿರುವ ಮತ್ತು ನಿವೇಶನದ ಮುಂದಿರುವ ರಸ್ತೆಯ ಮಟ್ಟದಿಂದ ಛಾವಣಿಯ ತುದಿಯವರೆಗೆ, ಮತ್ತು ಇಳಿಜಾರು ಛಾವಣಿಗಳಿಗೆ ಸಂಬಂಧಿಸಿದಂತೆ (ಹೊರಗೋಡೆಯ ಹೊರ ಮೇಲ್ಮೈ) ಇಳಿಜಾರು ಛಾವಣಿಯ ನಯಗೊಳಿಸಿದ ಮೇಲ್ಮೈಯನ್ನು ಛೇದಿಸುವ ಬಿಂದುವಿನವರೆಗೆ ಮತ್ತು ಬೀದಿಗೆ ಎದುರಾಗಿರುವ ಆಕಾರದ ಛಾವಣಿಗೆ ಸಂಬಂಧಿಸಿದಂತೆ, ಛಾವಣಿಯ ಮಟ್ಟದ ಮತ್ತು ಏಣಿನ–ಒಳಭಾಗಗಳ ನಡುವಿನ ಮಧ್ಯೆ ಬಿಂದುವಿನವರೆಗೆ ಅಳೆಯಲಾಗುವ ಲಂಬವಾಗಿರುವ ಅಂತರ. ಎತ್ತರವನ್ನು ಅಳೆಯುವ ಉದ್ದೇಶಕ್ಕಾಗಿ ಅಲಂಕಾರದ ಹೊರತು ಬೇರೆ ಯಾವುದೇ ಉಪಯೋಗವಿಲ್ಲದ ವಾಸ್ತು ವೈಶಿಷ್ಟ್ಯಗಳನ್ನು ಹೊರತುಪಡಿಸತಕ್ಕದ್ದು. ನೀರಿನ ತೊಟ್ಟಿ, ಹೊಗೆ ಕೊಳವೆಗಳು, ಲಿಫ್ಟ್ ಛಾವಣಿಗಳು ಮತ್ತು ಪಾಗಾರಗಳನ್ನು ಎತ್ತರ ಅಳೆಯುವ ಉದ್ದೇಶದಿಂದ ಹೊರತುಪಡಿಸತಕ್ಕದ್ದು.

2.46 **"ಎತ್ತರಿಸಿದ ಕಟ್ಟಡ" (Highrise building)** ಎಂದರೆ, ನೆಲ ಅಂತಸ್ತಿನ ಮೇಲೆ ಮತ್ತು ನಾಲ್ಕು ಅಥವಾ ಹೆಚ್ಚು ಅಂತಸ್ತುಗಳನ್ನು ಹೊಂದಿರುವ ಒಂದು ಕಟ್ಟಡ.

2.47 **"ಕೈಗಾರಿಕಾ ಕಟ್ಟಡ" (Industrial Building)** ಎಂದರೆ, ವಸ್ತುಗಳನ್ನು ಸಿದ್ದಪಡಿಸುವುದು ಅಥವಾ ಜೋಡಿಸುವುದು ಸೇರಿದಂತೆ ಎಲ್ಲಾ ಬಗೆಯ ವಸ್ತುಗಳ ಉತ್ಪಾದನೆಗಾಗಿ ಕಾರ್ಖಾನೆಯಂತೆ (ವಿದ್ಯುತ್) ಶಕ್ತಿಸ್ಥಾವರ, ತೈಲ ಸಂಸ್ಕರಣಗಾರ, ಅನಿಲ ಸ್ಥಾವರ, ಡಿಸ್ಟಿಲರಿ, ಮದ್ಯ ತಯಾರಿಕೆ, ಹೈನುಗಾರಿಕೆ, ಕಾರ್ಖಾನೆ, ಕಾರ್ಯಗಾರ ಮುಂತಾದವುಗಳಂತೆ ಪೂರ್ಣವಾಗಿ ಅಥವಾ ಭಾಗಶಃ ಉಪಯೋಗಿಸುವ ಕಟ್ಟಡ.

2.48 **"ಭೂ ಉಪಯೋಗ"(Land Use)**ವು ನಿವೇಶನ ಅಥವಾ ಭಾಗಶಃ ನಿವೇಶನ ಅಥವಾ ಕಟ್ಟಡ ಅಥವಾ ಭಾಗಶಃ ಕಟ್ಟಡದ ಹಾಲಿ ಉಪಯೋಗ ಅಥವಾ ಪ್ರಾಧಿಕಾರವು ಅನುಮತಿನೀಡಿರುವ ಉಪಯೋಗ. ಅಭಿವೃದ್ದಿ ಯೋಜನೆ ಮತ್ತು ವಲಯ ನಿಯಮಗಳಲ್ಲಿ ಗೊತ್ತುಪಡಿಸಿರುವ ವಲಯಗಳ ಭೂ ಉಪಯೋಗವು ಭೂ ಉಪಯೋಗದಲ್ಲಿ ಒಳಪಡುತ್ತದೆ.

2.49 **"ಪರವಾನಿಗೆ" (Licence)** ಎಂದರೆ, ಉಪವಿಧಿಗಳಿಂದ ವಿನಿಮಯಿಸಲಾದ ಕೆಲಸವನ್ನು ನಿರ್ವಹಿಸಲು ಪ್ರಾಧಿಕಾರದ ಲಿಖಿತ ರೂಪದ ಅನುಮತಿ ಅಥವಾ ಅಧಿಕಾರ ಪತ್ರ.

2.50 **"ಲಿಫ್ಟ್" (Lift)** ಎಂದರೆ ಜನ ಅಥವಾ ಸಾಮಾಗ್ರಿಗಳನ್ನು ಗೈಡೆಡ್ ಕಾರ್ ಪ್ಲಾಟ್‌ಫಾರಂ ಮೂಲಕ ಲಂಬ ಅಥವಾ ಲಂಬವೆಂದು ಪರಿಗಣಿಸಲ್ಪಡುವ ದಿಕ್ಕಿನಲ್ಲಿ ಎರಡು ಅಥವಾ ಹೆಚ್ಚು ಮಟ್ಟಗಳ ನಡುವೆ ಸಾಗಿಸುವ ಒಂದು ಸಲಕರಣೆ.

2.51 **"ಲಘು ಕೈಗಾರಿಕೆ"(Light Industriy)**ಎಂದರೆ, ವಿಪರೀತವಾದ ಹಾನಿಕಾರಕ ಅಥವಾ ಅಸಹ್ಯಕರ ಹೊಗೆ, ವಾಸನೆ, ಧೂಳು, ಕಸ ವಿಸರ್ಜಿಸುವ ಅಥವಾ ಇತರ ಆಕ್ಷೇಪಾರ್ಹ ಪರಿಸ್ಥಿತಿಗಳನ್ನು ಉಂಟು ಮಾಡದ ಮತ್ತು ವಿದ್ಯುತ್ ಬಳಕೆ ಸಹಿತ ಅಥವಾ ರಹಿತವಾಗಿ 50 ಕ್ಕಿಂತ ಹೆಚ್ಚು ಕೆಲಸಗಾರರನ್ನು ನಿಯೋಜಿಸಿಲ್ಲದ, ಒಟ್ಟು ಸ್ಥಾಪಿತ ಸಾಮರ್ಥ್ಯ 25 ಅಶ್ವಶಕ್ತಿಗೆ ಮೀರದ ಅನುಸೂಚಿ–I 'ಬಿ' ರಲ್ಲಿ ನೀಡಿರುವಂತೆ ಪ್ರಮಾಣಗಳನ್ನು ನಿರ್ವಹಿಸುತ್ತಿರುವುದನ್ನು ಖಚಿತಪಡಿಸುವ ಒಂದು ಕೈಗಾರಿಕೆ.

2.52 **"ಅಟ್ಟ" (Loft)** ಎಂದರೆ, ದಾಸ್ತಾನಿನ ಉದ್ದೇಶಗಳಿಗಾಗಿ ನಿರ್ಮಿಸಲಾಗುವ ಅಥವಾ ಬಳಸಿಕೊಳ್ಳಲಾಗುವ ನೆಲಮಟ್ಟದಿಂದ ಮೇಲಿನ ಉಳಿಕೆ ಸ್ಥಳ.

2.53 **"ಮಧ್ಯಮ ಕೈಗಾರಿಕೆ" (Medium Industry)** ಎಂದರೆ, 500ಕ್ಕಿಂತ ಹೆಚ್ಚು ಕೆಲಸಗಾರರನ್ನು ನೇಮಿಸಿಕೊಂಡಿರದ ಅನುಸೂಚಿ I 'ಸಿ' ರಲ್ಲಿ ನೀಡಿರುವಂತೆ ಪ್ರಮಾಣಗಳನ್ನು ನಿರ್ವಹಿಸುವುದನ್ನು ಖಚಿತಪಡಿಸುವ ಒಂದು ಕೈಗಾರಿಕೆ.

2.54 **"ಮೆಜನೈನ್ ಅಂತಸ್ತು" (Mezzanine Floor)** ಎಂದರೆ, ನೆಲಅಂತಸ್ತು ಮತ್ತು ಮೊದಲನೆ ಅಂತಸ್ತಿನ ನಡುವೆ ಮಾತ್ರ ಇರುವ ಒಂದು ಅಂತರ್ವರ್ತಿ ಅಂತಸ್ತು. ಮೆಜನೈನ್ ವಿಸ್ತೀರ್ಣವು ನೆಲ ಅಂತಸ್ತಿನ ಒಟ್ಟು ವಿಸ್ತೀರ್ಣದ ಮೂರನೇ ಒಂದು ಭಾಗದ ವಿಸ್ತೀರ್ಣಕ್ಕಿಂತ ಹೆಚ್ಚಾಗಿರ ತಕ್ಕದ್ದಲ್ಲ.

2.55 **"ದಹ್ಯೇತರ ವಸ್ತುಗಳು"(Non Combustible Materials)** ಎಂದರೆ, ತಾನೇ ಉರಿಯದ ಅಥವಾ ಪ್ರಧಾನ ಜ್ವಾಲೆಯನ್ನು ಹೊತ್ತಿಸಲು ಸಾಕಾಗುವಷ್ಟು ಪ್ರಮಾಣದ ಉರಿಯುವ ಬಿಸಿ ಅನಿಲವನ್ನು ಉಂಟು ಮಾಡದ ಪದಾರ್ಥ.

2.56 **"ಅಧಿಭೋಗ ಅಥವಾ ಬಳಕೆ ವರ್ಗ" (Occupancy or use Group)** ಎಂದರೆ, ಯಾವ ಪ್ರಧಾನ ಅನುಭೋಗಕ್ಕಾಗಿ ಕಟ್ಟಡವನ್ನು ಅಥವಾ ಕಟ್ಟಡದ ಒಂದು ಭಾಗವನ್ನು ಉಪಯೋಗಿಸಲಾಗುತ್ತಿದೆಯೋ ಅಥವಾ ಉಪಯೋಗಿಸಲು ಉದ್ದೇಶಿಸಲಾಗಿರುವುದೋ ಆ ಪ್ರಧಾನ ಅನುಭೋಗ. ಅಧಿಭೋಗಕ್ಕನುಸಾರವಾಗಿ ಕಟ್ಟಡಗಳನ್ನು ವರ್ಗೀಕರಿಸುವ ದೃಷ್ಟಿಯಿಂದ ಅಧಿಭೋಗವು ಅದಕ್ಕೆ ಅನುಷಂಗಿಕವಾಗಿರುವ ಪೂರಕ ಅಧಿಭೋಗಗಳನ್ನು ಒಳಗೊಳ್ಳುತ್ತದೆಂದು ಭಾವಿಸತಕ್ಕದ್ದು.

**ಟಿಪ್ಪಣಿ:–** ಕಟ್ಟಡ ಉಪವಿಧಿಗಳ ಉದ್ದೇಶಕ್ಕೆ ಅನ್ವಯಿಸುವ ಕಟ್ಟಡ ಉಪಯೋಗಗಳ ವರ್ಗೀಕರಣ ಮತ್ತು ಪರಿಭಾಷೆಗಳು ಮತ್ತು ಉಪಯೋಗಗಳ ವರ್ಗೀಕರಣವು, ಅನುಸೂಚಿ–I, I ಎ, I ಬಿ, ಮತ್ತು I ಸಿ ರಲ್ಲಿ ಕೊಡಲಾಗಿರುವಂತೆ, ಕರ್ನಾಟಕ ಪಟ್ಟಣ ಮತ್ತು ಗ್ರಾಮೀಣ ಯೋಜನೆ ಅಧಿನಿಯಮದ ಮೇರೆಗೆ ಅನುಮೋದಿತವಾಗಿರುವ ವಲಯ ನಿಯಮಗಳ ಉಪಬಂಧಗಳನ್ನು ಆಧರಿಸತಕ್ಕದ್ದು.

2.57 **ಖಾಲಿಜಾಗ"(Open Space)** ಎಂದರೆ, ಆಕಾಶದವರೆವಿಗೂ ಖಾಲಿ ಬಿಟ್ಟಿರುವ ನಿವೇಶನದ ಅವಿಭಾಜ್ಯ ಅಂಗವಾಗಿರುವ ಪ್ರದೇಶ.

2.58 **"ಮಾಲೀಕ"(Owner)**ಎಂಬುದರಲ್ಲಿ ಯಾವ ಸ್ವತ್ತಿನ ಸಂಬಂಧದಲ್ಲಿ ಪದವನ್ನು ಬಳಸಲಾಗಿದೆಯೋ ಆ ಸ್ವತ್ತಿನ ಸ್ವಾಧೀನದಲ್ಲಿರುವ ಬಾಡಿಗೆ ಅಥವಾ ಲಾಭಾಂಶಗಳನ್ನು ತಾನೇ ಮಾಲೀಕನೆಂದು ಅಥವಾ ಏಜೆಂಟ್, ಟ್ರಸ್ಟೀ, ಸಂರಕ್ಷಕ, ಮ್ಯಾನೇಜರ್ ಅಥವಾ ಇನ್ನೊಬ್ಬ ವ್ಯಕ್ತಿಯ ಪರವಾಗಿ ಅಥವಾ ಯಾವುದೇ ಮತೀಯ ಅಥವಾ ಧರ್ಮಾರ್ಥ ಉದ್ದೇಶಗಳಿಗಾಗಿ ತಾತ್ಕಾಲಿಕವಾಗಿ ಸ್ವೀಕರಿಸುವ ಅಥವಾ ಸ್ವೀಕರಿಸಲು ಹಕ್ಕುಳ್ಳವನಾಗಿರುವ ವ್ಯಕ್ತಿಯು ಸೇರುತ್ತಾನೆ.

2.59 **"ಪ್ಯಾರಾಪೆಟ್"(Parapet)**ಎಂದರೆ, ಚಾವಣಿಯ ಅಂಚಿನಲ್ಲಿ ಕಟ್ಟಿರುವ ಸಣ್ಣಗೋಡೆ, ಅಥವಾ ಅಡ್ಡಪಟ್ಟಿ.

2.60 **"ವಾಹನಗಳ ನಿಲುಗಡೆ ಸ್ಥಳ"(Parking Space)** ಎಂದರೆ, ಸುತ್ತಲೂ ಗೋಡೆಗಳಿಂದ ಆವೃತವಾಗಿರುವ ಅಥವಾ ಆವೃತವಾಗಿರದ, ಆಚ್ಛಾದಿತವಾಗಿರುವ ಅಥವಾ ಬಯಲು ಜಾಗವಾಗಿದ್ದು, ವಾಹನಗಳನ್ನು ನಿಲ್ಲಿಸಲು ಸಾಕಷ್ಟು ಸ್ಥಳಾವಕಾಶವಿರುವ, ಜೊತೆಗೆ ವಾಹನಗಳು ನಿಲ್ಲುವ ಸ್ಥಳದಿಂದ, ಬೀದಿ ಅಥವಾ ಯಾವುದೇ ಸಾರ್ವಜನಿಕ ಪ್ರದೇಶಕ್ಕೆ ಸೂಕ್ತ ಪ್ರವೇಶ ಮಾರ್ಗವಿರುವ ಹಾಗೂ ವಾಹನಗಳು ಪ್ರವೇಶಿಸಲು ಮತ್ತು ಹೊರ ಹೋಗಲು ಅವಕಾಶ ಇರುವ ಒಂದು ಪ್ರದೇಶ.

2.61 **"ಪೆಂಟ್ ಹೌಸ್"(Pent House)**ಎಂದರೆ, ಕಟ್ಟಡದ ಚಾವಣಿ ಮೇಲೆ 10ಚ.ಮೀ.ಗೆ ಮೀರದ ಮತ್ತು ಕೊನೇ ಪಕ್ಷ ಒಂದು ಕಡೆಯಾದರೂ ಯಾವುದೇ ವಿಭಜನೆಯಿಲ್ಲದ ಪೂರ್ಣವಾಗಿ ತೆರೆದಿರುವ ಆಚ್ಛಾದಿತವಾಗಿರುವ ಪ್ರದೇಶ.

2.62 **"ವ್ಯಕ್ತಿ"(Person)** ಎಂಬ ಪದವು ಸಮ್ಮಿಳಿತ ಅಥವಾ ಅಸಮ್ಮಿಳಿತ ವ್ಯಕ್ತಿಗಳ ಸಂಸ್ಥೆಗಳನ್ನು ಒಳಗೊಂಡಿರುತ್ತದೆ.

2.63 **"ಮೇಲ್ಪಾಯ(Plinth)"**ಎಂದರೆ, ನೆಲದಿಂದ ಅತಿ ನಿಕಟದಲ್ಲಿ, ನೆಲದ ಸುತ್ತಲಿನ ಮೇಲ್ಮೈ ಕ್ಷೇತ್ರ ಮತ್ತು ನೆಲದ ಮೇಲ್ಮೈ ಕ್ಷೇತ್ರಗಳ ನಡುವೆ ಇರುವ ಕಟ್ಟಡದ ಭಾಗ.

2.64 **"ಮೇಲ್ಪಾಯ ಕ್ಷೇತ್ರ" (Plinth Area)** ಎಂದರೆ, ಮೇಲ್ಪಾಯದ ನಿಕಟ ಪೂರ್ವದ ಕಟ್ಟಡ / ಕಟ್ಟಡಗಳಿಂದ ಆವರಿಸಲ್ಪಟ್ಟ ಪ್ರದೇಶದ ವಿಸ್ತೀರ್ಣ.

2.65 **"ಮೇಲ್ಪಾಯಮಟ್ಟ"(Plinth Level)**ಎಂದರೆ, ಸುತ್ತುವರಿದ ನೆಲದಿಂದ ಮೇಲೆ ಅತಿ ನಿಕಟದಲ್ಲಿರುವ ಕಟ್ಟಡದ ನೆಲಮಟ್ಟ.

2.66 **"ನಿವೇಶನ ಅಥವಾ ಪ್ರದೇಶ" (Plot or Site)** ಎಂದರೆ ಅಖಂಡ ಜಮೀನಿನ ಒಂದು ಭಾಗ ಕಟ್ಟಡಕ್ಕೆ ಹೊಂದಿಕೊಂಡ ಮತ್ತು ಅದರ ಉಪಭಾಗವಾದ ಹಾಲಿ ಅಥವಾ ಉಪಯೋಗಿಸಲು ಉದ್ದೇಶಿಸಿರುವ ಹೊರ ಕಟ್ಟಡ, ಆವರಣ, ಅಂಗಳ, ಬಿಡುವ ಜಾಗ ಮತ್ತು ತೋಟಗಳನ್ನು ಒಳಗೊಂಡಂತೆ ನಿವೇಶನವನ್ನು ನಿರ್ದಿಷ್ಟ ಪಡಿಸಿದ ಎಲ್ಲೆಯಿಂದ ಗುರ್ತಿಸಿರಬೇಕು.

2.67 **"ಕಟ್ಟಡದ್ವಾರ ಮಂಟಪ ಅಥವಾ ಮುಖ ಮಂಟಪ" (Porch or Portico)** ಎಂದರೆ, ಪಾದಚಾರಿಗಳು ಅಥವಾ ವಾಹನಗಳು ಕಟ್ಟಡವನ್ನು ಪ್ರವೇಶಿಸಲು ಸಾಧ್ಯವಾಗುವಂತೆ ಕಂಬಗಳ ಆಧಾರದಿಂದ ನಿರ್ಮಿಸಿದ ಅಥವಾ ಚಾಚು ತೊಲೆಯ ಆಧಾರದ ಮೇಲೆ ನಿರ್ಮಿಸಿರುವ ಛಾವಣಿ.

2.68 **"ಸಾರ್ವಜನಿಕ ಮತ್ತು ಅರೆ ಸಾರ್ವಜನಿಕ ಕಟ್ಟಡ" (Public and Semi Public Building)** ಎಂದರೆ, ರಾಜ್ಯ ಅಥವಾ ಕೇಂದ್ರ ಕಛೇರಿಗಳು ಅಥವಾ ಸ್ಥಳೀಯ ಪ್ರಾಧಿಕಾರಿಗಳು, ಚರ್ಚ್, ದೇವಸ್ಥಾನ, ಕ್ರೈಸ್ತ ಆರಾಧನಾ ಮಂದಿರ, ಮಸೀದಿ / ಯಾವುದೇ ಸಾರ್ವಜನಿಕ ಪೂಜಾ ಸ್ಥಳ, ಧರ್ಮಶಾಲೆ, ಕಾಲೇಜು ಶಾಲೆ, ಗ್ರಂಥಾಲಯ, ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವ ರಂಗಮಂದಿರ, ಸಾರ್ವಜನಿಕ ಸಂಗೀತ ಗೋಷ್ಠಿ ನಡೆಸುವ ಕೊಠಡಿ, ಸಾರ್ವಜನಿಕ ಸಭಾಂಗಣ, ಸಾರ್ವಜನಿಕ ಸಂಘ ಸಂಸ್ಥೆಗಳು ನಡೆಸುವ ಆಸ್ಪತ್ರೆ, ಸಾರ್ವಜನಿಕ ಸಮಾವೇಶದ ಉಪನ್ಯಾಸ ಕೊಠಡಿ ಅಥವಾ ಯಾವುದೇ ಇತರ ಸ್ಥಳಗಳಾಗಿದ್ದು, ಸಾಮಾನ್ಯವಾಗಿ ಅಥವಾ ವಿಶೇಷ ಸಂದರ್ಭಗಳಲ್ಲಿ ಉಪಯೋಗಿಸಬೇಕೆಂದು ಉದ್ದೇಶಿಸಿದ್ದು ಅದರಂತೆ ಉಪಯೋಗಿಸುವ ಕಟ್ಟಡ.

2.69 **"ವಾಸದ ಕಟ್ಟಡ" (Residential Building)** ಎಂದರೆ, ಸಂಪೂರ್ಣವಾಗಿ ಮಾನವ ವಾಸಕ್ಕಾಗಿ ಉಪಯೋಗಿಸುತ್ತಿರುವ ಅಥವಾ ನಿರ್ಮಿಸಲಾಗಿರುವ ಅಥವಾ ಅಳವಡಿಸಿಕೊಳ್ಳಲಾಗಿರುವ ಕಟ್ಟಡ ಮತ್ತು ಸಾಮಾನ್ಯವಾಗಿ ವಾಸಕ್ಕೆ ಉಪಯೋಗಿಸಲು ಅಗತ್ಯವಾದ ಗ್ಯಾರೇಜುಗಳು ಮತ್ತು ಹೊರಮನೆ(ಔಟ್ ಹೌಸ್) ಗಳನ್ನು ಒಳಗೊಳ್ಳುತ್ತದೆ.

2.70 **"ರಸ್ತೆ ಅಗಲ" (Road Width)**ಎಂದರೆ, ನಿವೇಶನದ ಮಧ್ಯಭಾಗದ ಎದುರಿನ ರಸ್ತೆ ಅಥವಾ ಬೀದಿಯಿಂದ ಸಮಕೋನದಲ್ಲಿ ನಿರ್ಮಿಸಿದ ಕಾಲುದಾರಿ ಮತ್ತು ಒಳಚರಂಡಿಗಳು ಸೇರಿದ ರಸ್ತೆ ಅಥವಾ ಬೀದಿಯ ಎಲ್ಲೆಗಳ ನಡುವಿನ ಅಂತರ. ಮುಖ್ಯರಸ್ತೆಗಳ ಸೇವಾರಸ್ತೆಗಳನ್ನು ಹೊಂದಿರುವ ರಸ್ತೆಗಳ ಸಂದರ್ಭದಲ್ಲಿ ನೆಲ ಅಂತಸ್ತು ಪ್ರದೇಶದ ಅನುಪಾತವನ್ನು ಮತ್ತು ಅಂತಸ್ತುಗಳ ಸಂಖ್ಯೆಗಳನ್ನು ನಿರ್ಧರಿಸಲು ರಸ್ತೆಯ ಅಗಲವು ಸರ್ವೀಸ್‌ರಸ್ತೆಯ ಅಗಲ ಮತ್ತು ಮುಖ್ಯ ರಸ್ತೆಯ ಅಗಲದ ಒಟ್ಟಾರೆ ಅಗಲವಾಗಿರತಕ್ಕದ್ದು.

2.71 **"ಕೊಠಡಿ ಎತ್ತರ"(Room Height)**ಎಂದರೆ, ಅಂತಿಮವಾಗಿ ಓರಣ ಮಾಡಿದ ನೆಲಗಟ್ಟಿನ ಹೊರಮೈ ಮತ್ತು ಅಂತಿಮವಾಗಿ ಓರಣ ಮಾಡಿದ ಮಾಳಿಗೆ ಮೇಲ್ಮೈ ನಡುವಿನ ಲಂಬಾಂತರ ಅಂತಿಮವಾಗಿ ಓರಣ ಮಾಡಿದ ಮಾಳಿಗೆ ನಿರ್ಮಾಣಕ್ಕೆ ಅವಕಾಶವಿರದಿದ್ದರೆ ಸೇರಿಕೆ ಅಥವಾ ತೊಲೆಗಳು (ಬೀಮ್ಸ್) ಅಥವಾ ತೊಲೆಗಳನ್ನು ಕಟ್ಟಿರುವ ಕೆಳಭಾಗದಿಂದ ಅಳತೆಯ ಮೇಲ್ಭಾಗವನ್ನು ನಿರ್ಧರಿಸತಕ್ಕದ್ದು.

2.72 **"ನೊಂದಾಯಿತವಾಸ್ತುಶಿಲ್ಪಿ/ಇಂಜನಿಯರ್/ಮೇಲ್ವಿಚಾರಕ" (Registered Architect/ Engineer / Supervisor)** ಎಂದರೆ, ವಿದ್ಯಾರ್ಹತೆ ಪಡೆದು ಹಾಗೂ ಪ್ರಾಧಿಕಾರದಿಂದ ನೊಂದಾಯಿಸಲ್ಪಟ್ಟ ವಾಸ್ತುಶಿಲ್ಪಿ/ ಇಂಜನಿಯರ್/ ಮೇಲ್ವಿಚಾರಕ.

2.73 **"ಸಾಲು ಮನೆಗಳು" (Row Housing)** ಎಂದರೆ, ಕನಿಷ್ಠ ಮೂರು ವಾಸದ ಘಟಕಗಳನ್ನೊಳಗೊಂಡ, ಒಂದೇ ಸಾಮಾನ್ಯ ಗೋಡೆ ಇದ್ದು ಪರಸ್ಪರ ಹತ್ತಿಕೊಂಡಿರುವ ಮತ್ತು ಮನೆ ಮುಂದೆ ಹಾಗೂ ಹಿಂದೆ ಮಾತ್ರ ಬಯಲು ಜಾಗವಿರುವ ಮನೆಗಳ ಸಾಲು.

2.74 **"ಅರೆ ಪ್ರತ್ಯೇಕಿತ ಕಟ್ಟಡ "(Semi detached building)** ಎಂದರೆ ಎರಡು ಕಟ್ಟಡಗಳ ನಡುವೆ ಒಂದೇ ಅಥವಾ ಸೇರಿಕೊಂಡಿರುವ ಗೋಡೆ ಇದ್ದು ಒಂದಕ್ಕೊಂದು ಹೊಂದಿಕೊಂಡಿರುವ ಹಾಗೂ ಮೂರು ಕಡೆಗಳಲ್ಲಿ ಬಯಲು ಜಾಗ(ನಡುಜಾಗ)ವಿರುವಂತೆ ಎರಡು ನಿವೇಶನಗಳಲ್ಲಿ ಕಟ್ಟಿರುವ ಕಟ್ಟಡ.

2.75 **"ಸೇವಾ ಕೈಗಾರಿಕೆ" (Service Industry)**ಎಂದರೆ, ವಿದ್ಯುತ್ತನ್ನು ಉಪಯೋಗಿಸಿ ಅಥವಾ ಉಪಯೋಗಿಸದೆ ಸೇವೆಯನ್ನು ಒದಗಿಸುವ ಒಂದು ಕೈಗಾರಿಕೆ. ವಿದ್ಯುತ್ತನ್ನು ಉಪಯೋಗಿಸಿದಲ್ಲಿ ಒಟ್ಟು ಸ್ಥಾಪಿತ ಸಾಮರ್ಥ್ಯವು 5 ಅಶ್ವಶಕ್ತಿಗಳಿಗೆ ಮೀರತಕ್ಕದ್ದಲ್ಲ ಅಥವಾ ನಿವೇಶನದ ವಿಸ್ತೀರ್ಣವು 240 ಚ.ಮೀ ಗಿಂತಲೂ ಹೆಚ್ಚಿರತಕ್ಕದಲ್ಲ. ಅನುಸೂಚಿ I 'ಎ' ರಲ್ಲಿ ಸೂಚಿಸಿರುವಂತೆ ಅಭಿವೃದ್ಧಿ ಯೋಜನೆಯ ಲಘು ಕೈಗಾರಿಕೆ ವಲಯದಲ್ಲಿ ಸೇವಾ ಕೈಗಾರಿಕೆಗಳಿಗೆ ಅನುಮತಿ ನೀಡಬಹುದು.

2.76 **"ನಡುಜಾಗ ರೇಖೆ" (Set back Line)** ಎಂದರೆ, ಆವರಿಸುವಿಕೆ ವ್ಯಾಖ್ಯಾಯನದ ಅಡಿಯಲ್ಲಿ ಯಾವುದು ಸೇರಿರುವುದಿಲ್ಲವೊ ಅದನ್ನು ಹೊರತು ಪಡಿಸಿ ಈ ಉಪವಿಧಿಗಳ ಮೇರೆಗೆ ನಿಗದಿಪಡಿಸಿರುವ ಹಾಗೂ ಈ ರೇಖೆಯಿಂದ ನಿವೇಶನದ ಎಲ್ಲೆಯವರೆಗೆ ಯಾವುದೇ ನಿರ್ಮಾಣಮಾಡಲು ಅವಕಾಶವಿಲ್ಲದ ಒಂದು ರೇಖೆ.

2.77 **"ಮೆಟ್ಟಲು ಕೊಠಡಿ" (Stair case Room)** ಎಂದರೆ, ಗಾಳಿ, ಮಳೆಯಿಂದ ರಕ್ಷಣೆ ಒದಗಿಸುವ ಉದ್ದೇಶಕ್ಕಾಗಿ ಮೆಟ್ಟಿಲುಗಳಿಗೆ ಸ್ಥಳಾವಕಾಶ ಮಾಡಿರುವ ಹಾಗೂ ಮಾನವನ ವಾಸಕ್ಕೆ ಉಪಯೋಗಿಸದ ಕೊಠಡಿ.

2.78 **"ಅಂತಸ್ತು" (Storey)** ಎಂದರೆ, ಒಂದು ನೆಲದ ಮೇಲ್ಮೈ ಮತ್ತು ಲಂಬವಾಗಿ ಮೇಲೆ ಅಥವಾ ಕೆಳಗಿರುವ ಮತ್ತೊಂದು ನೆಲದ ಮೇಲ್ಮೈಗಳ ನಡುವಿನ ಪ್ರದೇಶ.

2.79 **"ಹೊಂದಿಕೊಂಡು" (To abut)** ಎಂದರೆ, ಕಟ್ಟಡ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ರಸ್ತೆ ಎಲ್ಲೆಯನ್ನು ಅಥವಾ ಪಕ್ಕದ ನಿವೇಶನವನ್ನು ಅಥವಾ ಕಟ್ಟಡವನ್ನು ಸ್ಪರ್ಷಿಸುವುದು.

2.80 **"ನಿರ್ಮಿಸು" (To Erect)** ಎಂದರೆ ನಿವೇಶನದಲ್ಲಿ ಈಗಾಗಲೇ ಕಟ್ಟಡವನ್ನು ನಿರ್ಮಿಸಿರಲಿ ಅಥವಾ ಇಲ್ಲದಿರಲಿ ಅಸ್ತಿತ್ವದಲ್ಲಿರುವ ಕಟ್ಟಡವನ್ನು ವಿಸ್ತರಿಸುವುದು ಅಥವಾ ಬದಲಾವಣೆಗಳನ್ನು ಮಾಡುವುದು ಸೇರಿದಂತೆ ಭಾಗಶಃ ಅಥವಾ ಪೂರ್ಣವಾಗಿ ಹೊಸ ಕಟ್ಟಡವನ್ನು ಕಟ್ಟುವುದು.

2.81 **"ಶೌಚ ಗೃಹ" (Water Closet)** ಎಂದರೆ, ನೀರಿನಿಂದ ಸ್ವಚ್ಛಗೊಳಿಸಲು ಅವಕಾಶವಿರುವ ಪಾಯಖಾನೆ. ಆದರೆ ಸ್ನಾನದ ಕೋಣೆ ಇದರಲ್ಲಿ ಸೇರುವುದಿಲ್ಲ.

2.82 **"ವಲಯ ನಿಯಮಗಳು"(Zoning Regulations)** ಎಂದರೆ, ವಿವಿಧ ಭೂ ಉಪಯೋಗ ವಲಯಗಳಲ್ಲಿ ನಿಗದಿಪಡಿಸಿರುವ ಉಪಯೋಗಗಳು; ಕಟ್ಟಡಗಳ ಸುತ್ತಲಿನ ಖಾಲಿಜಾಗಗಳು, ನಿವೇಶನದ ಆವೃತ ಪ್ರದೇಶ ಅಂತಸ್ತು ವಿಸ್ತೀರ್ಣ ಅನುಪಾತ, ಕಟ್ಟಡದ ಎತ್ತರ, ಕಟ್ಟಡಗಳಸಾಲು ರೇಖೆ, ವಾಹನ ನಿಲುಗಡೆ ಪ್ರದೇಶ ಮೊದಲಾದವುಗಳನ್ನು ನಿಗದಿಪಡಿಸಿರುವ ಕರ್ನಾಟಕ ನಗರ ಮತ್ತು

ಗ್ರಾಮೀಣ ಯೋಜನಾ ಅಧಿನಿಯಮ 1961, ರ ಅಡಿಯಲ್ಲಿ ಬೆಂಗಳೂರು ನಗರದ ಅಭಿವೃದ್ಧಿ ಯೋಜನೆ ಯೊಂದಿಗೆ ಹೊರಡಿಸಿದ ಭೂ ಉಪಯೋಗ ವಲಯ ನಿಬಂಧನೆಗಳು.

**ಸೂಚನೆ:–** ಈ ಉಪವಿಧಿಗಳಲ್ಲಿ ಅರ್ಥೈಸದೇ ಇರುವ ಪದಗಳು ಮತ್ತು ಪದವಿನ್ಯಾಸಗಳು ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಅಧಿನಿಯಮ, 1976 ಮತ್ತು ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮ, 1961, ಇವುಗಳಲ್ಲಿ ನೀಡಿರುವ ಅರ್ಥಗಳನ್ನೇ ಹೊಂದಿರುತ್ತದೆ.

## ಭಾಗ– II

## ಆಡಳಿತ

**3.0. ಕಟ್ಟಡ ಪರವಾನಿಗೆ**

3.1. **ಪರವಾನಿಗೆ:–** ಯಾವುದೇ ಕಟ್ಟಡವನ್ನು ನಿರ್ಮಿಸುವ ಅಥವಾ ಪುನರ್ ನಿರ್ಮಿಸುವ ಅಥವಾ ಐಹಿಕವಾಗಿ ಬದಲಾವಣೆಗಳನ್ನು ಮಾಡುವ ಅಥವಾ ಮಾಡಲು ಕಾರಣಕರ್ತನಾಗುವ ಪ್ರತಿ ವ್ಯಕ್ತಿಯೂ ಪ್ರಾಧಿಕಾರದಿಂದ ಪರವಾನಿಗೆಯನ್ನು ಪಡೆಯತಕ್ಕದ್ದು.

3.2. **ಅರ್ಜಿ ಮತ್ತು ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲೆಗಳು:–** ಅಧಿನಿಯಮದ 299, 304 ಅಥವಾ 312 ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದಂತೆ ವ್ಯಾಪಾರದ ಸಂಬಂದಧ ಪ್ರದರ್ಶನಕ್ಕಾಗಿ ಮತ್ತು ಸರ್ಕಸ್ಸುಗಳಿಗೆ ಹಾಕಲಾಗುವ ತಾತ್ಕಾಲಿಕ ನಿರ್ಮಾಣಗಳು ಒಳಗೊಂಡಂತೆ ಯಾವುದೇ ಕಟ್ಟಡವನ್ನು ನಿರ್ಮಿಸುವ ಅಥವಾ ಪುನರ್ ನಿರ್ಮಿಸುವ ಇಂಗಿತ ಹೊಂದಿರುವ ಪ್ರತಿ ವ್ಯಕ್ತಿಯೂ ಅನುಸೂಚಿ–II ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕೆಳಕಂಡ ನಕ್ಷೆಗಳೂ, ದಾಖಲೆಗಳೂ, ಮತ್ತು ಮಾಹಿತಿಗಳನ್ನೊಳಗೊಂಡಂತೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

**3.2.(1) ಹಕ್ಕು ಪತ್ರ ಅಥವಾ ಸ್ವಾಧೀನ ಪ್ರಮಾಣ ಪತ್ರ:–** ಸ್ವತ್ತಿಗೆ ಸಕ್ಷಮ ಪ್ರಾಧಿಕಾರವು ನೀಡಿರುವ ಹಕ್ಕು ಪತ್ರ ಅಥವಾ ಸ್ವಾಧೀನ ಪ್ರಮಾಣ ಪತ್ರದ ಪ್ರತಿ.

**3.2(2) ಸ್ವತ್ತಿನ ಕಾರ್ಡು ಮತ್ತು ಇತ್ತೀಚಿನ ಕರ ನಿರ್ಧಾರಣೆಮಾಡಿದ ಪುಸ್ತಕದ ಉದ್ಧೃತ ಭಾಗ:–** ಭೂ ಮಾಪನ ಮತ್ತು ಭೂ ದಾಖಲೆಗಳ ಇಲಾಖೆ (ನಗರ ಭೂಮಾಪನ ಇಲಾಖೆ) ಯಿಂದ ನಕ್ಷೆಯೊಂದಿಗೆ ನೀಡಲಾಗಿರುವ ಸ್ವತ್ತಿನ ಕಾರ್ಡು ಅಥವಾ ಬೆಂಗಳೂರು ಮಹಾನಗರ ಪಾಲಿಕೆಯಿಂದ ಸ್ವತ್ತಿನ ಅಳತೆಗಳನ್ನು ಸೂಚಿಸಿ ನೀಡಲಾಗಿರುವ ಇತ್ತೀಚಿನ ಕರ ನಿರ್ಧಾರಣೆ ಮಾಡಿದ ಪುಸ್ತಕದ ಉದ್ಧೃತ ಭಾಗದ ಪ್ರತಿ .

**3.2.(3) ಇತ್ತೀಚಿನವರೆವಿಗೆ ತೆರಿಗೆ ಸಂದಾಯಮಾಡಿದ ರಶೀತಿ:–** ಇತ್ತೀಚಿನ ವರ್ಷದವರೆವಿಗೆ ಬೆಂಗಳೂರು ಮಹಾನಗರ ಪಾಲಿಕೆಗೆ ಸಂದಾಯಮಾಡಿದ ಆಸ್ತಿ ತೆರಿಗೆ ರಶೀತಿಯನ್ನು ಲಗತ್ತಿಸತಕ್ಕದ್ದು.

**3.2(4) ಹಿಂದೆ ಮಂಜೂರಾದ ನಕ್ಷೆ:–** ಅರ್ಜಿಯು ಹಾಲಿ ಕಟ್ಟಡದ ವಿಸ್ತರಣೆ ಅಥವಾ ಬದಲಾವಣೆ ಅಥವಾ ನವೀಕರಣಕ್ಕೆ ಸಂಬಂಧ ಪಟ್ಟಿದ್ದರೆ ಹಿಂದೆ ಮಂಜೂರು ಮಾಡಿರುವ ಧೃಢಿಕೃತ ನಕ್ಷೆಯ ಪ್ರತಿ. ಅರ್ಜಿದಾರನಿಗೆ ಯಾವುದೇ ಕಾರಣಕ್ಕಾಗಿ ಹಾಲಿ ಕಟ್ಟಡದ ಹಿಂದೆ ಮಂಜೂರಾದ ನಕ್ಷೆಯನ್ನು ಸಲ್ಲಿಸಲಾಗದಿದ್ದಲ್ಲಿ, ಅಂತಹ ಸಂದರ್ಭದಲ್ಲಿ ಸ್ಥಳ ನಕ್ಷೆಯೊಂದಿಗೆ ಹಾಲೀ ಕಟ್ಟಡ ನಕ್ಷೆಯನ್ನು ಸಲ್ಲಿಸಬೇಕಾಗುತ್ತದೆ.

**3.2(5) ನಕ್ಷೆಗಳು:–** ಅಮೋನಿಯ ಹಾಳೆಗಳಲ್ಲಿ ಮುದ್ರಿತವಾದ ಕೆಳಕಂಡ ನಕ್ಷೆಗಳು. ರೇಖಾ ಬಟ್ಟೆ ಅಥವಾ ಪಾಲಿಯೆಸ್ಟರ್ ರೇಖಾ ಫಿಲ್ಮ್‌ನಲ್ಲಿ ತಯಾರಿಸಿದ ಒಂದು ನಕ್ಷೆಯನ್ನು ಅಮೋನಿಯಾ ಮುದ್ರಣಗಳ ಜೊತೆಗೆ ಲಗತ್ತಿಸಬೇಕು.

**3.2(5.1) ಸೂಚಿ ನಕ್ಷೆ:–** 1: 10,000 ಪ್ರಮಾಣಕ್ಕಿಂತಲೂ ಕಡಿಮೆ ಇಲ್ಲದಂತೆ ನೆರೆಹೊರೆ ಹೆಗ್ಗುರುತುಗಳನ್ನು ನಮೂದಿಸಿ ನಿವೇಶನದ ಗಡಿಗಳ ಸ್ಥಾನಗಳನ್ನು ತೋರಿಸುವ ಸೂಚಿ ನಕ್ಷೆ.

**3.2(5.2) ನಿವೇಶನದ ಸ್ಥಳ ನಕ್ಷೆ:–** ಒಂದು ಹೆಕ್ಟೇರ್ ಕ್ಷೇತ್ರದ ವರೆಗಿನ ನಿವೇಶನಗಳಿಗೆ 1:500 ಪ್ರಮಾಣ ಮತ್ತು ಒಂದು ಹೆಕ್ಟೇರ್‌ಗಿಂತಲೂ ಹೆಚ್ಚಿನ ಕ್ಷೇತ್ರದ ನಿವೇಶನಗಳಿಗೆ 1:1000 ಪ್ರಮಾಣದಲ್ಲಿ ತಯಾರಿಸಿದ ನಿವೇಶನದ ಸ್ಥಳ ನಕ್ಷೆ. ನಿವೇಶನದ ಸ್ಥಳ ನಕ್ಷೆಯು ಕೆಳಕಂಡ ವಿವರಗಳನ್ನು ನಮೂದಿಸತಕ್ಕದ್ದು.

ಎ) **ನಿವೇಶನದ ಆಸ್ತಿ ಸಂಖ್ಯೆ:** ನಿವೇಶನವು ನೆಲೆಸಿರುವ ಬ್ಲಾಕ್, ಓಣಿ ಅಥವಾ ರಸ್ತೆಯ ಹೆಸರು, ಮಂಜೂರಾದ ಬಡಾವಣೆಯಲ್ಲಿದ್ದಲ್ಲಿ ಬಡಾವಣೆ ಮಂಜೂರಾತಿಯ ಆಧಾರಿತ ಸಂಖ್ಯೆ ಮತ್ತು ನಿವೇಶನದ ಸಂಖ್ಯೆ, ಕಟ್ಟಡ ಉಪಯೋಗದ ವಿವರಗಳನ್ನು ಸೂಚಿಸುವ ನಕ್ಷೆಯ ಶಿರೋನಾಮೆ.

ಬಿ) ನಿವೇಶನದ ಮತ್ತು ನಿವೇಶನಕ್ಕೆ ಹೊಂದಿಕೊಂಡಂತೆ ಇರುವ ಆಸ್ತಿಯ ಮಾಲೀಕನಿಗೆ ಸೇರಿದ ಜಮೀನಿನ ಸರಹದ್ದುಗಳು.

ಸಿ) ಕಟ್ಟಡ ನಕ್ಷೆಗೆ ಸೂಚಕವಾದ ಉತ್ತರ ದಿಕ್ಕು

ಡಿ) ನಿವೇಶನಕ್ಕೆ ಹೊಂದಿಕೊಂಡಂತೆ ಇರುವ ರಸ್ತೆ, ಬೀದಿ, ಅಥವಾ ಓಣಿಗಳ ಅಗಲಗಳೊಂದಿಗೆ ಅವುಗಳ ಹೆಸರು ಮತ್ತು ವಿವರಣೆ.

ಇ) ಅಕ್ಕ–ಪಕ್ಕದಲ್ಲಿ ಖಾಲಿಇರುವ ಅಥವಾ ಕಟ್ಟಡಗಳಿರುವ ನಿವೇಶನಗಳ ಸ್ಥಾನಗಳು.

ಎಫ್) ಉದ್ದೇಶಿತ ಕಟ್ಟಡವು ಆವರಿಸಲ್ಪಡುವ ಪ್ರದೇಶ ಮತ್ತು ಸೂಕ್ತ ಗಾಳಿ ಮತ್ತು ಬೆಳಕಿಗಾಗಿ ಬಿಡಬೇಕೆಂದು ಉದ್ದೇಶಿಸಿರುವ ನಡುಜಾಗಗಳು.

ಜಿ) ಉದ್ದೇಶಿತ ಕಟ್ಟಡವನ್ನು ನಿರ್ಮಿಸಬೇಕಾಗಿರುವ ನೆಲವು ಸ್ವಾಭಾವಿಕ ವಸ್ತುಗಳಾದ ಬಂಡೆ, ಗರಸುಕಲ್ಲು, ಜೇಡಿಮಣ್ಣು, ಮರಳು ಮೊದಲಾದವುಗಳಿಂದ ಕೂಡಿದೆಯೇ, ಅಥವಾ ಕೃತಕವಾಗಿ ಮಿಶ್ರಣ ಮಾಡಲಾಗಿದೆಯೆ ಎಂಬ ಮಾಹಿತಿ ಕೃತಕವಾಗಿ ಮಿಶ್ರಣಮಾಡಿದ ನೆಲವಾಗಿದ್ದಲ್ಲಿ, ಅದನ್ನು ತಯಾರಿಸಿದ ಕಾಲ, ಮತ್ತು ಮಿಶ್ರಣ ಕಲೆಗೆ ಉಪಯೋಗಿಸಿದ

ವಸ್ತುಗಳನ್ನು ನಮೂದಿಸಬೇಕು. ನೆಲವು ಇಳಿಜಾರಾಗಿದ್ದಲ್ಲಿ ಹಾಗೂ ಇಳಿಜಾರಿನ ಪ್ರಮಾಣ ಶೇಕಡಾ (1:20) ಕ್ಕಿಂತಲೂ ಹೆಚ್ಚಿದ್ದಲ್ಲಿ ಬ್ಲಾಕ್ ಲೆವೆಲ್‌ಗಳನ್ನು ಸ್ಥಳ ನಕ್ಷೆಯಲ್ಲಿ ನಮೂದಿಸಬೇಕು.

**ಹೆಚ್)** ಬಾವಿಗಳು, ಕಾಲುವೆಗಳು, ವಿದ್ಯುತ್‌ಚ್ಛಕ್ತಿ ಮಾರ್ಗಗಳು, ಮೊದಲಾದ ಭೌತಿಕ ಆಕೃತಿಗಳು.

**ಐ)** ಹಾಲಿ ಮರಗಳು ಮೊದಲಾದ ಸ್ವಾಭಾವಿಕ ಆಕೃತಿಗಳು.

**ಜೆ)** ನೆಲ ಮಟ್ಟಕ್ಕಿಂತ ಕೆಳಗೆ ತಳ ಅಂತಸ್ತು ಅಥವಾ ಸೆಲ್ಲರ್‌ಗಳನ್ನು ಉದ್ದೇಶಿಸಿದಲ್ಲಿ ಬ್ಲಾಕ್ ಲೆವೆಲ್‌ಗಳು.

**ಕೆ)** ಪ್ರಾಧಿಕಾರವು ನಿರ್ಧಿಷ್ಟಪಡಿಸಿದ ಇತರ ವಿವರಗಳು

**3.2 (5.3) ಕಟ್ಟಡ ನಕ್ಷೆ:** ಕೆಳಗೆ ನಮೂದಿಸಿರುವ ವಿವರಗಳನ್ನೊಳಗೊಂಡಂತೆ 1:100 ಪ್ರಮಾಣದ ಅಳತೆಗಿಂತಲೂ ಹೆಚ್ಚಿನ ಅಳತೆಗೆ ತಯಾರಿಸದೆ ಇರುವ ಕಟ್ಟಡ ನಕ್ಷೆ. ಅವು ಯಾವುವೆಂದರೆ;

**ಎ)** ಎಲ್ಲ ಅಂತಸ್ತುಗಳಲ್ಲಿನ ಕಟ್ಟಡಗಳ ವಿವಿಧ ಭಾಗಗಳು, ಕೊಠಡಿಗಳ ಅಳತೆಗಳು, ಮೆಟ್ಟಲು, ಲಿಫ್ಟ್, ಯಂತ್ರಗಳ ಕೊಠಡಿ, ರ‍್ಯಾಂಪ್, ಮೊದಲಾದವುಗಳ ಸ್ಥಾನಗಳೊಂದಿಗೆ ರಸ್ತೆಯ ಮೇಲೆ ಕಾಣುವ ಕಟ್ಟಡದ ನೋಟದೊಂದಿಗೆ ಉತ್ತರ ದಿಕ್ಕನ್ನು ಚಿತ್ರಿಸಿರುವ ಅಂತಸ್ತುಗಳ ನಕ್ಷೆ.

**ಬಿ)** ಕಟ್ಟಡದ ವಿವಿಧ ಭಾಗಗಳ ಉಪಯೋಗ ಅಥವಾ ಅನುಭೋಗ.

**ಸಿ)** ಅಗತ್ಯ ಸೇವೆಗಳಾದ ಶೌಚಾಗಾರಗಳು, ಸ್ನಾನದ ಕೊಠಡಿಗಳು, ನೀರಿನ ತೊಟ್ಟಿಗಳು ಮೊದಲಾದವುಗಳ ನಿರ್ಧಿಷ್ಟ ಸ್ಥಾನಗಳು.

**ಡಿ)** ಅಡಿಪಾಯಗಳ ಅಳತೆ, ಗೋಡೆಗಳ ದಪ್ಪ, ಸ್ಥಂಬಗಳ ನಡುವಿನ ಜಾಗ, ಛಾವಣಿಯ ದಪ್ಪ, ಕಟ್ಟಡದ ಮತ್ತು ಕೊಠಡಿಗಳ ಎತ್ತರ, ಪ್ಯಾರಾಪೆಟ್‌ನ ಎತ್ತರ, ಒಳಚರಂಡಿ ಮತ್ತು ಛಾವಣಿಯ ಮೇಲ್ಮಟ್ಟದ ಇಳಿಜಾರು, ಟ್ರೆಡ್, ರ‍್ಯೆಸ್ ಮತ್ತು ಲ್ಯಾಂಡಿಂಗ್ ಅಗಲ, ಅಡ್ಡ ಕಂಬಿ ಮೊದಲಾದವುಗಳನ್ನು ನಮೂದಿಸಿರುವ ಮೆಟ್ಟಲಿನ ವಿವರಗಳು ಇತ್ಯಾದಿಗಳನ್ನು ಒಳಗೊಂಡ ವಿಭಾಗ ನಕ್ಷೆ.

**ಇ)** ಎಲ್ಲ ಕೊಠಡಿಗಳಲ್ಲಿನ ಗಾಳಿ–ಬೆಳಕು ಸಂಚಾರದ ವ್ಯವಸ್ಥೆ.

**ಎಫ್)** ಕಟ್ಟಡದ ಒಳಗಿನ ಅಥವಾ ಸುತ್ತಲಿನ ಬಯಲು ಪ್ರದೇಶಗಳು ಮತ್ತು ಅಂಗಳಗಳು.

**ಜಿ)** ಒಳಚರಂಡಿ ವ್ಯವಸ್ಥೆ.

**ಹೆಚ್)** ಅಳತೆ ಮತ್ತು ಸಂಖ್ಯೆಗಳನ್ನು ತೋರಿಸುವ ಎಲ್ಲ ಬಾಗಿಲುಗಳು, ಕಿಟಕಿಗಳು ಮತ್ತು ಗಾಳಿ ಕಿಂಡಿಗಳ ಪಟ್ಟಿ.

**ಐ)** ಗೋಡೆಗಳ ಹೊರಭಾಗದಲ್ಲಿ ಚಾಚಿದ ಚಜ್ಜಾ, ಬಾಲ್ಕನಿ, ಕ್ಯಾನೋಪಿ ಮೊದಲಾದಕಟ್ಟಡದ ಭಾಗಗಳು.

**ಜೆ)** ತಳ ಅಂತಸ್ತು ಇದ್ದಲ್ಲಿ ಪ್ರವೇಶದ್ವಾರ, ನೆಲಮಟ್ಟ ಮತ್ತು ಕಟ್ಟಡಕ್ಕೆ ಸಂಬಂಧಿಸಿದಂತೆ ಇಳಿಜಾರು ಪ್ರಮಾಣ 1:10 ಕ್ಕಿಂತಲೂ ಹೆಚ್ಚಿಲ್ಲದ ರ‍್ಯಾಂಪ್‌ನ ಸ್ಥಾನ, ತಳ ಅಂತಸ್ತಿನಲ್ಲಿ ಚರಂಡಿ ವ್ಯವಸ್ಥೆ, ಇತ್ಯಾದಿ.

**ಕೆ)** ವಾಹನಗಳು ಒಳಬರುವ, ಹೊರಹೋಗುವ ಪ್ರವೇಶಮಾರ್ಗಗಳು, ಚಲನದ ಮಾರ್ಗಗಳನ್ನು ಸೂಚಿಸಿ, ಉಪವಿಧಿ 16.0 ರಲ್ಲಿ ವಿಧಿಸಿರುವ ವಾಹನಗಳಿಗೆ ತಕ್ಕಂತೆ ವಾಹನ ನಿಲುಗಡೆಗೆ ವ್ಯವಸ್ಥೆ.

**ಎಲ್)** ನಿವೇಶನದ ಕ್ಷೇತ್ರ, ಎಲ್ಲ ಕಟ್ಟಡಗಳ ಮೇಲ್ಛಾಯ ಕ್ಷೇತ್ರ, ಪ್ರತಿ ಅಂತಸ್ತಿನ ನೆಲ ವಿಸ್ತೀರ್ಣ, ಮತ್ತು ಒಟ್ಟು ನೆಲವಿಸ್ತೀರ್ಣ, ಕಟ್ಟಡದ ಆವೃತ ಪ್ರದೇಶ, ಕಟ್ಟಡದ ಒಟ್ಟು ಎತ್ತರ ಮೊದಲಾದ ಇತರ ವಿವರಗಳು.

**ಎಮ್)** ನಕ್ಷೆಯು ಸುಲಭ, ತ್ವರಿತ ಮತ್ತು ನಿಖರವಾದ ಅಳತೆಗಳನ್ನು ಹೊಂದಿರುವ ಸಂಪೂರ್ಣ ವಿವರವನ್ನು ಹೊಂದಿರತಕ್ಕದ್ದು.

**3.2(6)** **ಪರವಾನಿಗೆ ಶುಲ್ಕದ ರಶೀತಿ:–** ಉಪವಿಧಿ 3.7.1 ಮತ್ತು 3.7.2 ರಲ್ಲಿ ನಿಗದಿ ಪಡಿಸಿರುವಂತೆ ಪರವಾನಿಗೆ ಶುಲ್ಕವನ್ನು ಮಹಾನಗರ ಪಾಲಿಕೆಯ ನಿಧಿಗೆ ಸಂದಾಯ ಮಾಡಿರುವುದಕ್ಕೆ ನೀಡಿರುವ ರಶೀತಿ.

**3.2(7)** **ಛಾಪಾ ಕಾಗದದಲ್ಲಿ ನಷ್ಟ ಪರಿಹಾರ ಕರಾರು ಪತ್ರ** ಪ್ರಾಧಿಕಾರವು ನಿಗದಿಪಡಿಸುವಂತೆ ಸಲ್ಲಿಸತಕ್ಕದ್ದು.

**3.2(8)** ಈ ಉಪವಿಧಿಗಳ **ಅನುಸೂಚಿXIII** ರ ಪ್ರಕಾರ ದ್ವಿಪ್ರತಿಗಳಲ್ಲಿ ಭರ್ತಿಮಾಡಿದ ರಾಷ್ಟ್ರೀಯ ಕಟ್ಟಡ ಸಂಘಟನೆಯ ಅನುಸೂಚಿ–II.

**3.2(9)** **ತಳಪಾಯ ಪ್ರಮಾಣ ಪತ್ರ:–** ಹಳೆಯ ಕಟ್ಟಡಗಳ ಮೇಲೆ ಹೊಸಕಟ್ಟಡಗಳನ್ನು ನಿರ್ಮಿಸಲು ಉದ್ದೇಶಿಸಿರುವ ಸಂದರ್ಭದಲ್ಲಿ ತಳಪಾಯವು ಹೆಚ್ಚುವರಿ ಭಾರವನ್ನು ತಡೆಯಲು ಸಾಮರ್ಥ್ಯ ಹೊಂದಿರುವುದಾಗಿ ಅನುಸೂಚಿ–IV ರನ್ವಯ ನೊಂದಾಯಿಸಲ್ಪಟ್ಟ ವಾಸ್ತುಶಿಲ್ಪಿ/ ಇಂಜಿನಿಯರ್/ ಮೇಲ್ವಿಚಾರಕರು ಪ್ರಮಾಣಿಕರಿಸಿರುವ ತಳಪಾಯ ಪ್ರಮಾಣ ಪತ್ರ.

**3.2(10)** **ಇತರ ಪ್ರಮಾಣ ಪತ್ರಗಳು:–** ಎಲ್ಲಿ ಅನ್ವಯಿಸುವುದೋ ಅಲ್ಲಿ ಕೆಳಕಂಡ ಪ್ರಾಧಿಕಾರಗಳಿಂದ ಪ್ರಮಾಣ ಪತ್ರಗಳು.

| ಏಜೆನ್ಸಿ | ಇವುಗಳ ಸಂಬಂಧದಲ್ಲಿ |
|---|---|
| **3.2(10.1)** ಬೆಂಗಳೂರು ಅಭಿವೃದ್ಧಿಪ್ರಾಧಿಕಾರ | (ಎ) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ 1961 ರ ಪ್ರಕರಣ 14 ಮತ್ತು 15 ರಂತೆ ಭೂ ಉಪಯೋಗ ಬದಲಾವಣೆಗಾಗಿ ಕಾರ್ಯಾರಂಭ ಪ್ರಮಾಣಪತ್ರ.<br>(ಬಿ) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ 1961ರ ಪ್ರಕರಣ 17 ರಂತೆ ಭೂ ಭಾಗದ ಬೇರ್ಪಡಿಕೆ ಅಥವಾ ಒಂದು ಗೂಡಿಸುವಿಕೆ ಪ್ರಮಾಣ ಪತ್ರ.<br>(ಸಿ) ಅನುಸೂಚಿ I ರಲ್ಲಿ ನಮೂದಿಸಿರುವಂತೆ ವಿಶೇಷ ಸಂಧರ್ಭಗಳಲ್ಲಿ ಕಟ್ಟಡ ನಿರ್ಮಾಣಕ್ಕೆ ಅನುಮತಿಯನ್ನು ಪಡೆಯ ಬೇಕಾಗಿರುವ ಪ್ರಕರಣಗಳು. |

| ಏಜೆನ್ಸಿ | ಇವುಗಳ ಸಂಬಂಧದಲ್ಲಿ |
|---|---|
| | (ಡಿ) ಸಮೂಹ ವಸತಿ ನಿವೇಶನದ ಕ್ಷೇತ್ರವು 4000 ಚದರ ಮೀಟರ್ ಗಳನ್ನು ಮೀರಿದಲ್ಲಿ ಅನುಮೋದಿತ ವಿನ್ಯಾಸ ನಕ್ಷೆ.<br>(ಇ) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಗುತ್ತಿಗೆ ಕರಾರು ಆಧಾರದ ಮೇಲೆ ಮಂಜೂರು ಮಾಡಿರುವ ನಾಗರೀಕ ಸೌಲಭ್ಯ ನಿವೇಶನವಾಗಿದ್ದಲ್ಲಿ ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮದ 14ನೇ ಮತ್ತು 15ನೇ ಪ್ರಕರಣಗಳ ಪ್ರಕಾರ ಕಟ್ಟಡ ಕಟ್ಟಲು ಪ್ರಾರಂಭಿಕ ಪ್ರಮಾಣ ಪತ್ರ. |
| **3.2(10.2)** ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ. | ಎತ್ತರಿಸಿದ ಕಟ್ಟಡಗಳು ಮತ್ತು ಸಮೂಹವಸತಿ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.3)** ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ. | ಎತ್ತರಿಸಿದ ಕಟ್ಟಡಗಳು ಮತ್ತು ಸಮೂಹ ವಸತಿ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.4)** ಅಗ್ನಿ ಸೇವೆಗಳ ಇಲಾಖೆ. | ಎತ್ತರಿಸಿದ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.5)** ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರ | ಎತ್ತರಿಸಿದ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.6)** ದೂರ ಸಂಪರ್ಕ ಇಲಾಖೆ | ಏಳು ಅಂತಸ್ತುಗಳಿಗಿಂತ ಹೆಚ್ಚಾಗಿರುವ ಎತ್ತರಿಸಿದ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣಾ ಪತ್ರ. |
| **3.2(10.7)**) ಕರ್ನಾಟಕ ಕೊಳಚೆ ನಿರ್ಮೂಲನ ಮತ್ತು ಅಭಿವೃದ್ಧಿ ಮಂಡಳಿ. | ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ, 1973, ಇದರ 3ನೇ ಪ್ರಕರಣದ ಅಡಿಯಲ್ಲಿ ಸಂಬಂಧಿಸಿದ ಪ್ರದೇಶಗಳಿಗೆ ಘೋಷಿತವಾದ ಅಭಿವೃದ್ಧಿ ಯೋಜನೆಗಳಿಗೆ ಅಡ್ಡಿಯಾಗದೆ ಇರುವ ಬಗ್ಗೆ ನಿರಾಕ್ಷೇಪಣ ಪತ್ರ. |
| **3.2(10.8)** ಜಿಲ್ಲಾ ಮ್ಯಾಜಿಸ್ಟ್ರೇಟ್ | ಡ್ರೈವ್–ಇನ್ ಚಿತ್ರಮಂದಿರಗಳನ್ನು ಒಳ ಗೊಂಡಂತೆ ತಾತ್ಕಾಲಿಕ ಮತ್ತು ಅರೆ ತಾತ್ಕಾಲಿಕ ಚಿತ್ರಮಂದಿರಗಳು ಮತ್ತು ಪೆಟ್ರೋಲ್ ಪಂಪ್‌ಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.9)** ಕಾರ್ಖಾನೆ ಮತ್ತು ಬಾಯ್ಲರ್‌ಗಳ ನಿರ್ದೇಶಕರು | ಕೈಗಾರಿಕಾ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.10)** ಸ್ಫೋಟಕಗಳ ನಿಯಂತ್ರಣಾಧಿಕಾರಿ | ದಹ್ಯ ವಸ್ತುಗಳ ದಾಸ್ತಾನು ಸಂಗ್ರಹಣಾಗಾರಕ್ಕೆ ಅಥವಾ ಮಾರಾಟಕ್ಕೆ ಉದ್ದೇಶಿಸಿರುವ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |
| **3.2(10.11)** ರೈಲ್ವೆ ಇಲಾಖೆ. | ರೈಲ್ವೆ ಎಲ್ಲೆಗೆ ತಾಕುವ ಕಟ್ಟಡಗಳ ಸಂದರ್ಭದಲ್ಲಿ ನಿರಾಕ್ಷೇಪಣ ಪತ್ರ. |

**3.2(11)** **ಮೇಲ್ವಿಚಾರಣೆ ಪ್ರಮಾಣ ಪತ್ರ:–** ಅನುಸೂಚಿ–III ರಲ್ಲಿ ಗೊತ್ತುಪಡಿಸಿರುವ ನಮೂನೆಯಲ್ಲಿ ಮೇಲ್ವಿಚಾರಣೆಯನ್ನು ನಡೆಸುವ ಸೂಕ್ತ ನೊಂದಾಯಿತವಾಸ್ತುಶಿಲ್ಪಿ / ಇಂಜಿನಿಯರ್ /ಮೇಲ್ವಿಚಾರಕ ರಿಂದ ಪ್ರಮಾಣ ಪತ್ರ.

**3.3.** **ನಕ್ಷೆಗಳ ತಯಾರಿಕೆ ಮತ್ತು ರುಜುಮಾಡುವುದು:–** ಎಲ್ಲ ನಕ್ಷೆಗಳು, ಮಾಲೀಕರು ಅಥವಾ ಅವರ ವಿಧಿಸಮ್ಮತ ಅಧಿಕೃತ ಏಜೆಂಟರ ಅಥವಾ ನ್ಯಾಯವಾದಿಗಳಿಂದಲೂ ಮತ್ತು ನೊಂದಾಯಿತ ವಾಸ್ತುಶಿಲ್ಪಿ/ ಇಂಜಿನಿಯರ್/ ಮೇಲ್ವಿಚಾರಕರಿಂದಲೂ ಸಹಿ ಮಾಡಲ್ಪಟ್ಟಿರಬೇಕು. ನೊಂದಾಯಿತರು ತಮ್ಮ ಹೆಸರು, ವಿಳಾಸ, ವಿದ್ಯಾರ್ಹತೆ ಮತ್ತು ಪ್ರಾಧಿಕಾರವು ನೀಡಿರುವ ನೊಂದಣಿ ಸಂಖ್ಯೆಯನ್ನು ನಕ್ಷೆಯಲ್ಲಿ ನಮೂದಿಸಬೇಕು.

**3.4.** **ನಕ್ಷೆ ಹಾಳೆಗಳ ಅಳತೆ:–** ಸಲ್ಲಿಸುವ ನಕ್ಷೆಗಳ ಹಾಳೆಗಳು ಕೆಳಕಂಡ ಅಳತೆಗಳನ್ನು ಹೊಂದಿರತಕ್ಕದ್ದು.

**ಕೋಷ್ಟಕ - 1**

**(ಉಪವಿಧಿ 3.4)**

**ನಕ್ಷೆ ಹಾಳೆಗಳ ಅಳತೆ**

| ಕ್ರಮ ಸಂಖ್ಯೆ | ಗುಣಮಟ್ಟ | ಕತ್ತರಿಸಿದ ಸರಿ ಮಾಡಿದ ಅಳತೆ(ಮಿಲಿ ಮೀಟರುಗಳಲ್ಲಿ) | ಕತ್ತರಿಸಿ ಸರಿಮಾಡಿಲ್ಲದೆ (ಅಚ್ಚುಕಟ್ಟಿಲ್ಲದ)ಅಳತೆ (ಕನಿಷ್ಟ ಮಿಲಿ ಮೀಟರುಗಳಲ್ಲಿ |
|---|---|---|---|
| 1 | ಎ೦ | 841 X 1189 | 880 X 1230 |
| 2 | ಎ1 | 594 X 841 | 625 X 880 |
| 3 | ಎ2 | 420 X 594 | 450 X 625 |
| 4 | ಎ3 | 297 X 420 | 330 X 450 |
| 5 | ಎ4 | 210 X 297 | 240 X 330 |
| 6 | ಎ5 | 148 X 210 | 165 X 240 |

**ಸೂಚನೆ:–** ನಮೂದಿಸಬೇಕಾದ ವಿವರಗಳನ್ನು ಪರಿಗಣಿಸಿ ಮೇಲೆ ಹೇಳಿದ ಯಾವುದಾದರೂ ಅಳತೆಯನ್ನು ಅಂಗೀಕರಿಸಬಹುದು.

**3.5. ನಕ್ಷೆಗಳಿಗೆ ಬಣ್ಣಹಾಕುವುದು:–** ಕೋಷ್ಟಕ 2 ರಲ್ಲಿ ಗೊತ್ತುಪಡಿಸಿರುವಂತೆ ಎಲ್ಲ ನಕ್ಷೆಗಳಿಗೂ ಬಣ್ಣ ಹಾಕಿ ಎ–4 ಅಳತೆಗೆ ಮಡಿಸುವುದು.

**ಕೋಷ್ಟಕ – 2**

**(ಉಪವಿಧಿ 3.5)**

**ನಕ್ಷೆಗಳಿಗೆ ಬಣ್ಣ ಹಾಕುವುದು**

| ಕ್ರ. ಸಂ | ಬಾಬ್ತು | ನಿವೇಶನ ನಕ್ಷೆ | | | ಕಟ್ಟಡದ ನಕ್ಷೆ | | |
|---|---|---|---|---|---|---|---|
| | | ಬಿಳಿ ನಕ್ಷೆ | ನೀಲಿ ಮುದ್ರಣ | ಅಮೋನಿಯಾ ಮುದ್ರಣ | ಬಿಳಿನಕ್ಷೆ | ನೀಲಿ ಮುದ್ರಣ | ಅಮೋನಿಯಾ ಮುದ್ರಣ |
| 1 | ಕಟ್ಟಡಗಳ ಗೆರೆಗಳು | ದಟ್ಟ ಕಪ್ಪು | ದಟ್ಟ ಕಪ್ಪು | ದಟ್ಟ ಕಪ್ಪು | ದಟ್ಟ ಕಪ್ಪು | ದಟ್ಟ ಕಪ್ಪು | ದಟ್ಟ ಕಪ್ಪು |
| 2 | ಈಗಿರುವ ಬೀದಿ | ಹಸಿರು | ಹಸಿರು | ಹಸಿರು | " | " | " |
| 3 | ಮುಂದೆ ನಿರ್ಮಿಸಿರುವ ಯಾವುದೇ ಬೀದಿಗಳು | ಹಸಿರು ಚುಕ್ಕೆಗಳು | ಹಸಿರು ಚುಕ್ಕೆಗಳು | ಲಸಿರು ಚುಕ್ಕೆಗಳು | " | " | " |
| 4 | ಪರವಾನಗಿ ನೀಡಬಹುದಾದ ಕಟ್ಟಡದ ರೇಖೆ | ದಟ್ಟ ಚುಕ್ಕೆಗಳಿಂದ ಕೂಡಿದ | ಘಟ್ಟ ಚುಕ್ಕೆಗಳಿಂದ ಕೂಡಿದ | ಘಟ್ಟ ಚುಕ್ಕೆಗಳಿಂದ ಕೂಡಿದ | " | " | " |
| 5 | ಖಾಲಿ ಜಾಗ | ಬಣ್ಣವಿಲ್ಲ | ಬಣ್ಣವಿಲ್ಲ | ಬಣ್ಣವಿಲ್ಲ | ಬಣ್ಣವಿಲ್ಲ | ಬಣ್ಣವಿಲ್ಲ | ಬಣ್ಣವಿಲ್ಲ |
| 6 | ಈಗಿರುವ ಕಾಮಗಾರಿ | ಕಪ್ಪುಗೆರೆಗಳು | ಬಿಳಿ | ನೀಲಿ | ಕಪ್ಪು | ಬಿಳಿ | ನೀಲಿ |
| 7 | ಕೆಡವಿ ಹಾಕಲು ಉದ್ದೇಶಿಸಿದ ಕಾಮಗಾರಿ | ಹಳದಿಯಿಂದ ಕೊರೆದ ಗೆರೆಗಳು | ಹಳದಿಯಿಂದ ಕೊರೆದ ಗೆರೆಗಳು | ಹಳದಿಯಿಂದ ಕೊರೆದ ಗೆರೆಗಳು | ಹಳದಿಯಿಂದ ಕೊರೆದ ಗೆರೆಗಳು | ಹಳದಿಯಿಂದ ಕೊರೆದ ಗೆರೆಗಳು | ಹಳದಿಯಿಂದ ಕೊರೆದ ಗೆರೆಗಳು |
| 8 | ಉದ್ದೇಶಿತ ಕೆಲಸ (ಟಿಪ್ಪಣಿ–1 ನೋಡಿ) | ಕೆಂಪಿನಿಂದ ತುಂಬಿದ | ಕೆಂಪಿನಿಂದ ತುಂಬಿದ | ಕೆಂಪು | ಕೆಂಪು | ಕೆಂಪು | ಕೆಂಪು |
| 9 | ಒಳಚರಂಡಿ ಮತ್ತು ನೈರ್ಮಲ್ಯ ಕೆಲಸ | ಕೆಂಪು ಚುಕ್ಕೆಗಳು | ಕೆಂಪು ಚುಕ್ಕೆಗಳು | ಕೆಂಪು ಚುಕ್ಕೆಗಳು | ಕೆಂಪು ಚುಕ್ಕೆಗಳು | ಕೆಂಪು ಚುಕ್ಕೆಗಳು | ಕೆಂಪು ಚುಕ್ಕೆಗಳು |
| 10 | ನೀರು ಸರಬರಾಜು ಕೆಲಸ | ತೆಳ್ಳಗಿನ ಕಪ್ಪು ಗೆರೆಗಳು | ತೆಳ್ಳಗಿನ ಕಪ್ಪು ಗೆರೆಗಳು | ತೆಳ್ಳಗಿನ ಕಪ್ಪು ಗೆರೆಗಳು | ತೆಳ್ಳಗಿನ ಕಪ್ಪು ಗೆರೆಗಳು | ತೆಳ್ಳಗಿನ ಕಪ್ಪು ಗೆರೆಗಳು | ತೆಳ್ಳಗಿನ ಕಪ್ಪು ಗೆರೆಗಳು |

**ಸೂಚನೆ:–** 1) ಸಂಪೂರ್ಣವಾದ ಹೊಸ ನಿರ್ಮಾಣಕ್ಕೆ ಎಂಟನೇ ಸಂಖ್ಯೆಯ ಬಾಬ್ತು ಅನ್ವಯಿಸುವುದಿಲ್ಲ.

2) ಭೂ ಅಭಿವೃದ್ಧಿ ಉಪವಿಭಾಗ, ಮತ್ತು ವಿನ್ಯಾಸ ನಕ್ಷೆಗಳಿಗೆ ಸೂಕ್ತ ಬಣ್ಣಗಳನ್ನು ಉಪಯೋಗಿಸಿ ಅದರಂತೆ ಬಣ್ಣಗಳನ್ನು ಸೂಚಿಯಲ್ಲಿ ತೋರಿಸುವುದು.

**3.6. ವಾಸ್ತುಶಿಲ್ಪಿಗಳು/ ಇಂಜಿನಿಯರುಗಳು/ ಮೇಲ್ವಿಚಾರಕರ ನೊಂದಣಿ** ಈ ಉಪವಿಧಿಗಳಲ್ಲಿ ಉಲ್ಲೇಖಿಸಿರುವ ವಾಸ್ತುಶಿಲ್ಪಿಗಳು/ ಇಂಜಿನಿಯರುಗಳು/ ಮೇಲ್ವಿಚಾರಕರನ್ನು ಅನುಸೂಚಿ IV ರಲ್ಲಿ ಗೊತ್ತುಪಡಿಸಿರುವಂತೆ ಪ್ರಾಧಿಕಾರದಿಂದ ನೊಂದಾಯಿಸ ತಕ್ಕದ್ದು.

**3.7. ಕಟ್ಟಡ ಪರವಾನಿಗೆ ಶುಲ್ಕ.**

**3.7.1.** ಅಧಿನಿಯಮದ 299, 304 ಮತ್ತು 312 ನೇ ಪ್ರಕರಣಗಳನ್ವಯ ಯಾವುದೇ ಕಟ್ಟಡದ ನಿರ್ಮಾಣ ಅಥವಾ ಪುನರ್ ನಿರ್ಮಾಣ ಅಥವಾ ಬದಲಾವಣೆಗಳನ್ನು ಮಾಡಲು ಇಚ್ಛಿಸುವ ಪ್ರತಿ ವ್ಯಕ್ತಿಯೂ ರೂ. 300/– (ಮೂರು ನೂರು ರೂಪಾಯಿಗಳು) ಕನಿಷ್ಟ ಶುಲ್ಕಕ್ಕೆ ಒಳಪಟ್ಟು ಕಟ್ಟಡ ಪರವಾನಿಗೆ ಶುಲ್ಕವನ್ನು ಮಹಾನಗರ ಪಾಲಿಕೆಯ ನಿಧಿಗೆ ಸಂದಾಯ ಮಾಡತಕ್ಕದ್ದು.

ಪರಂತು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ತಮ್ಮ ಭೂಮಿಗಳಲ್ಲಿ ಕಟ್ಟಡಗಳನ್ನು ನಿರ್ಮಿಸಲು ಪರವಾನಿಗೆ ಶುಲ್ಕವನ್ನು ಸಂದಾಯಮಾಡಬೇಕಾಗಿಲ್ಲ.

**ಸೂಚನೆ:–** ಪರವಾನಿಗೆ ಶುಲ್ಕದ ನಿರ್ಧಾರಣೆಯು ಕೆಳಕಂಡ ಅಂಶಗಳಿಗೆ ಒಳಪಟ್ಟಿರುತ್ತದೆ.

ಎ) ಹಾಲಿ ಕಟ್ಟಡಗಳ ಪುನರ್ ನಿರ್ಮಾಣಕ್ಕೂ ಹೊಸ ಕಟ್ಟಡಗಳ ನಿರ್ಮಾಣಕ್ಕೆ ವಿಧಿಸುವ ಶುಲ್ಕದಷ್ಟೇ ಸಮನಾದ ಶುಲ್ಕವು ಅನ್ವಯಿಸುತ್ತದೆ.

ಬಿ) ಹಾಲಿ ಕಟ್ಟಡಗಳಿಗೆ ಅಧಿಕ ನಿರ್ಮಾಣ ಮತ್ತು ಬದಲಾವಣೆಗಳನ್ನು ಮಾಡುವ ಸಂದರ್ಭದಲ್ಲಿ ಹೊಸಕಟ್ಟಡಗಳಿಗೆ ಅನ್ವಯವಾಗುವ ದರದಲ್ಲಿ ಶುಲ್ಕವು ಬದಲಾಯಿಸಿದ ಭಾಗಗಳಿಗೆ ಮಾತ್ರ ಅನ್ವಯಿಸುವುದು.

**3.7.2** ಕಟ್ಟಡ ಪರವಾನಿಗೆಗೆ ಸಲ್ಲಿಸಿರುವ ಅರ್ಜಿಯೊಂದಿಗೆ ರೂ.50/– (ಐವತ್ತು ರೂಪಾಯಿ) ಗಳಿಗೆ ಕಡಿಮೆ ಇಲ್ಲದಂತೆ ಪರವಾನಿಗೆ ಶುಲ್ಕದ ಶೇಕಡ 5 ಕ್ಕೆ ಕಡಿಮೆ ಇಲ್ಲದ ಶುಲ್ಕವನ್ನು ಪರಿಶೀಲನಾ ಶುಲ್ಕವಾಗಿ ಸಂದಾಯ ಮಾಡತಕ್ಕದ್ದು. ಈ ಶುಲ್ಕವನ್ನು ಮರುಪಾವತಿ ಮಾಡಲಾಗುವುದಿಲ್ಲ. ಪರವಾನಿಗೆ ಶುಲ್ಕದ ಉಳಿದ ಹಣವನ್ನು ಪ್ರಾಧಿಕಾರವು ನೀಡಿದ ಒತ್ತಾಯ ಸೂಚನ ಪತ್ರವನ್ನು ಸ್ವೀಕರಿಸಿದ ನಂತರ ಸಂದಾಯಮಾಡತಕ್ಕದ್ದು.

**3.7.3** ಆವರಣಗೋಡೆಗೆ ಪ್ರತಿ ಮೀಟರ್ ಉದ್ದಕ್ಕೆ ಒಂದು ರೂಪಾಯಿಯಂತೆ ಒತ್ತಾಯ ಸೂಚನಾ ಪತ್ರವನ್ನು ಸ್ವೀಕರಿಸಿದ ನಂತರ ಪರವಾನಿಗೆ ಶುಲ್ಕವನ್ನು ಸಂದಾಯ ಮಾಡತಕ್ಕದ್ದು.

**3.8 ನೆಲ ಬಾಡಿಗೆ:–** ಪ್ರಾಧಿಕಾರದ ಅನುಮತಿಗೊಳಪಟ್ಟು ವಾಹನಗಳ ಮತ್ತು ಪಾದಚಾರಿಗಳ ಸಂಚಾರಕ್ಕೆ ಅಡಚಣೆಯಾಗದಂತೆ ಸಾರ್ವಜನಿಕ ಸ್ವತ್ತಿನ ಮೇಲೆ ಕಟ್ಟಡದ ಸಾಮಗ್ರಿಗಳನ್ನು ಶೇಖರಿಸಲು ಪ್ರಾಧಿಕಾರವು ನಿಗಧಿಪಡಿಸುವ ನೆಲಬಾಡಿಗೆ.

**ಸೂಚನೆ:–** (i) ನೆಲಬಾಡಿಗೆಯು ಕಟ್ಮಡದ ಎಲ್ಲ ಅಂತಸ್ತುಗಳ ನೆಲವಿಸ್ತೀರ್ಣದ ಮೇಲೆ ಆಧಾರಿಸಲ್ಪಟ್ಟಿರುತ್ತದೆ. ನೆಲ ಬಾಡಿಗೆ ಎರಡು ವರ್ಷಗಳವರೆವಿಗೆ ಮಾತ್ರ ಮಾನ್ಯತೆ ಪಡೆದಿರುತ್ತದೆ. ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿ ಅಧಿಬೋಗ ಪ್ರಮಾಣ ಪತ್ರವನ್ನು ಎರಡು ವರ್ಷಗಳೊಳಗಾಗಿ ಪಡೆಯದಿದ್ದಲ್ಲಿ ಕಟ್ಟಡ ನಿರ್ಮಾಣವು ಪೂರ್ಣಗೊಳ್ಳುವವರೆವಿಗೆ ಪ್ರತಿ ವರ್ಷ ಅಥವಾ ಅದರ ಭಾಗಕ್ಕೆ ಅರ್ಧದರದಲ್ಲಿ ನೆಲಬಾಡಿಗೆಯನ್ನು ಸಂದಾಯಮಾಡತಕ್ಕದ್ದು.

**ಸೂಚನೆ:–** (ii) ನೆಲ ಬಾಡಿಗೆಯು ಕಟ್ಟಡ ಸಾಮಾಗ್ರಿಗಳ ಶೇಖರಣೆಗಾಗಿ ಮಾತ್ರ ಅನ್ವಯಿಸುವುದೇ ಹೊರತು ಇತರ ಉದ್ದೇಶಗಳಿಗೆ ಅನ್ವಯಿಸುವುದಿಲ್ಲ.

**ಸೂಚನೆ:–** (iii) ಸಾರ್ವಜನಿಕ ಸ್ಥಳವನ್ನು ಅಗೆದ ವಸ್ತುಗಳು ಮತ್ತು ಕಟ್ಟಡದ ಭಗ್ನಾವಶೇಷಗಳನ್ನು ಶೇಖರಿಸಲು ಉಪಯೋಗಿಸಿದಲ್ಲಿ ನೆಲಬಾಡಿಗೆಯ ನಾಲ್ಕುಪಟ್ಟು ದರದನ್ವಯ ಪ್ರತ್ಯೇಕ ಶುಲ್ಕವನ್ನು ಸಂದಾಯ ಮಾಡಬೇಕಾಗುತ್ತದೆ.

**3.9 ಎತ್ತರಿಸಿದ ಕಟ್ಟಡಗಳಿಗೆ ನೆಲಬಾಡಿಗೆ:–** ನಡುಜಾಗಗಳು ಮತ್ತು ಆವೃತ ಪ್ರದೇಶವು ಎಷ್ಟೇ ಇರಲಿ ಎತ್ತರಿಸಿದ ಕಟ್ಟಡಗಳು ನೆಲಬಾಡಿಗೆಯಿಂದ ವಿನಾಯಿತಿ ಪಡೆದಿರುವುದಿಲ್ಲ.

**3.10 ನೆಲ ಬಾಡಿಗೆಗೆ ವಿನಾಯಿತಿಗಳು:**

ಕೆಳಕಂಡ ಪ್ರಕರಣಗಳಲ್ಲಿ ನೆಲಬಾಡಿಗೆಗೆ ವಿನಾಯಿತಿ ನೀಡಬಹುದಾಗಿರುತ್ತದೆ. ಅವುಯಾವುದೆಂದರೆ;

(1) 6 ಮೀಟರ್ ಮತ್ತು ಅಧಿಕ ಮುಂದಿನ ನಡುಜಾಗ ಹೊಂದಿರುವ ಹಾಗೂ ಶೇಕಡ 55 ಕ್ಕಿಂತಲೂ ಹೆಚ್ಚು ಆವೃತ ಪ್ರದೇಶ ಹೊಂದಿಲ್ಲದೆ ಇರುವ ಪ್ರತ್ಯೇಕ ವಸತಿ ಕಟ್ಟಡ.

(2) 8 ಮೀಟರ್ ಮತ್ತು ಅಧಿಕ ಮುಂದಿನ ನಡುಜಾಗಹೊಂದಿರುವ ಹಾಗೂ ಶೇಕಡ 33.33 ಕ್ಕಿಂತಲೂ ಹೆಚ್ಚು ಆವೃತ ಪ್ರದೇಶ ಹೊಂದಿಲ್ಲದೆ ಇರುವ ಶಾಲೆಗಳು, ಕಾಲೇಜುಗಳು ಮತ್ತು ಇತರ ಸಂಸ್ಥೆಗಳು.

(3) 8 ಮೀಟರ್ ಮತ್ತು ಅಧಿಕ ಮುಂದಿನ ನಡುಜಾಗ ಹೊಂದಿರುವ ಹಾಗೂ ಶೇಕಡ 45 ಕ್ಕಿಂತಲೂ ಹೆಚ್ಚು ಆವೃತ ಪ್ರದೇಶ ಹೊಂದಿಲ್ಲದೆ ಇರುವ ಧಾರ್ಮಿಕ ಮತ್ತು ಸಾಂಸ್ಕೃತಿಕ ಕಟ್ಟಡಗಳು.

(4) ಕಟ್ಟಡ ಸಾಮಾಗ್ರಿಗಳನ್ನು ಆಸ್ತಿಯ ಎಲ್ಲೆಯೊಳಗೆ ಶೇಖರಿಸಲು ಸಾಮರ್ಥ್ಯ ಉಳ್ಳ ವಿಶಾಲ ಪ್ರದೇಶ ಹೊಂದಿರುವ ಭಾರಿ ಕೈಗಾರಿಕೆಗಳು ಮತ್ತು ಸರ್ಕಾರದ ಕಟ್ಟಡಗಳು.

**ಸೂಚನೆ:–** ಮಹಾನಗರ ಪಾಲಿಕೆಯ ಜಮೀನು, ಪಾದಚಾರಿ ಮಾರ್ಗ ಮತ್ತು ರಸ್ತೆಗಳನ್ನು ಕಟ್ಟಡ ಸಾಮಾಗ್ರಿಗಳನ್ನು ದಾಸ್ತಾನುಮಾಡಲು ಹಾಗೂ ಕಟ್ಟಡದ ಭಗ್ನಾವಶೇಷಗಳ ರಾಶಿಯನ್ನು ಶೇಖರಿಸುವುದಕ್ಕೆ ಉಪಯೋಗಿಸುವುದಿಲ್ಲವೆಂದು ಅರ್ಜಿದಾರನಿಂದ 30/- ರೂಪಾಯಿ ಮೌಲ್ಯದ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಪಡೆದುಕೊಂಡನಂತರವೇ ನೆಲಬಾಡಿಗೆಗೆ ವಿನಾಯಿತಿಯನ್ನು ಮಂಜೂರುಮಾಡತಕ್ಕದ್ದು. ಈ ಷರತ್ತುಗಳನ್ನು ಅವರು ಉಲ್ಲಂಘಿಸಿದರೆ ಭೂಮಿ ಮತ್ತು ಕಟ್ಟಡಗಳು ಇತ್ಯಾದಿಗಳ ಮೇಲೆ ವಿಧಿಸುವ ತೆರಿಗೆಯ ಬಾಕಿಯಂತೆ ವಸೂಲು ಮಾಡಬಹುದಾದ ಸಾಮಾನ್ಯ ದರಗಳ ನೆಲಬಾಡಿಗೆಯ ಜೊತೆಗೆ ನಿರ್ದಿಷ್ಟ ಪಡಿಸಿದ ಮೌಲ್ಯದ ಶೇ 50 ರಷ್ಟು ದಂಡವನ್ನು ಸಂದಾಯಮಾಡಬೇಕಾಗುತ್ತದೆ. .

3.11.1 **ತಾತ್ಕಾಲಿಕ ಷೆಡ್‌ಗಳ ನಿರ್ಮಾಣ:–** ಕಟ್ಟಡ ನಿರ್ಮಾಣಕ್ಕೆ ಅದರ ನಿವೇಶನದಲ್ಲಿ (ಸಾರ್ವಜನಿಕ ಭೂಮಿಯನ್ನು ಹೊರತು ಪಡಿಸಿ) ಅಗತ್ಯವಾದ ತಾತ್ಕಾಲಿಕ ಷೆಡ್‌ಗಳಿಗೆ ಕಟ್ಟಡದ ಪರವಾನಿಗೆಯೊಂದಿಗೆ ಅನುಮತಿಸಬಹುದು ಈ ಷೆಡ್‌ಗಳನ್ನು ನಿರ್ಮಾಣದ ಕೆಲಸ ಪ್ರಾರಂಭವಾಗಲು ಒಂದು ತಿಂಗಳ ಮುಂಚಿತವಾಗಿ ಕಟ್ಟತಕ್ಕದ್ದಲ್ಲ ಮತ್ತು ಕೆಲಸ ಮುಗಿದ ಕೂಡಲೇ ತೆಗೆದು ಹಾಕತಕ್ಕದ್ದು. ತಾತ್ಕಾಲಿಕ ಷೆಡ್ಡನ್ನು ತೆಗೆದು ಹಾಕಿದ ನಂತರವೇ ಅಧಿಭೋಗ ಪ್ರಮಾಣ ಪತ್ರವನ್ನು ನೀಡತಕ್ಕದ್ದು.

3.11.2 **ತಾತ್ಕಾಲಿಕ ಕಟ್ಟಡಗಳು:** ವಾಣಿಜ್ಯ ಸ್ವರೂಪದ ಸಂಸ್ಥೆಗಳು, ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ಮುಂತಾದವುಗಳನ್ನು ನಡೆಸಿಕೊಂಡು ಹೋಗಲು ಅನುಮತಿಯಲ್ಲಿ ವಿಧಿಸಲಾದ ಷರತ್ತಿಗೊಳಪಟ್ಟು ಮತ್ತು ಸೀಮಿತ ಕಾಲಾವಧಿಗೆ ಪ್ರಾಧಿಕಾರದ ವಿಶೇಷ ಅನುಮತಿಯೊಂದಿಗೆ ಯಾವ ಉದ್ದೇಶಕ್ಕೋಸ್ಕರ ಇವುಗಳನ್ನು ಉಪಯೋಗಿಸಲು ನಿಗಧಿ ಪಡಿಸಲಾಗಿರುತ್ತದೋ, ಅಂತಹ ಉದ್ದೇಶಕ್ಕಾಗಿ ಮಾತ್ರ ತಾತ್ಕಾಲಿಕ ಕಟ್ಟಡಗಳನ್ನು ಅನುಮತಿಸತಕ್ಕದ್ದು. ಅದರಲ್ಲಿ ನಮೂದಿಸಲಾದ ಕಾಲಾವಧಿ ಮುಕ್ತಾಯದ ನಂತರ ಅಂತಹ ತಾತ್ಕಾಲಿಕ ನಿರ್ಮಾಣಗಳನ್ನು ಪೂರ್ಣವಾಗಿ ತೆಗೆಯತಕ್ಕದ್ದು.

**3.12 ಒತ್ತಾಯ ಸೂಚನಾ ಪತ್ರ:–** ಕಟ್ಟಡ ಪರವಾನಿಗೆಗಾಗಿ ಪರವಾನಿಗೆ ಶುಲ್ಕ, ನೆಲಬಾಡಿಗೆ ಮತ್ತು ಇತರ ಶುಲ್ಕಗಳನ್ನು ಸಂದಾಯಮಾಡಲು ನೀಡುವ ಒತ್ತಾಯ ಸೂಚನ ಪತ್ರವು ಸದರಿ ಪತ್ರವನ್ನು ನೀಡಿದ 45 ದಿನಗಳವರೆವಿಗೆ ಮಾನ್ಯತೆ ಪಡೆದಿರುತ್ತದೆ. ಈ ಅವಧಿಯು ಮುಗಿದ ಬಳಿಕ ಮರುಮಾನ್ಯತೆ ಪಡೆದ ಒತ್ತಾಯ ಸೂಚನಾ ಪತ್ರದ ಪ್ರಕಾರ ಶುಲ್ಕಗಳನ್ನು ಪಾವತಿಮಾಡತಕ್ಕದ್ದು. ಮರುಮಾನ್ಯತೆಯು ಮರುಮಾನ್ಯತೆ ನೀಡಿದ ಸಂದರ್ಭಕ್ಕೆ ಒಳಪಟ್ಟಿರುತ್ತದೆ.

**3.13 ಪರವಾನಿಗೆ ಶುಲ್ಕ ಮತ್ತು ನೆಲಬಾಡಿಗೆಯ ಪರಿಷ್ಕರಣೆ –** ಪರವಾನಿಗೆ ಶುಲ್ಕ ಮತ್ತು ನೆಲಬಾಡಿಗೆಯ ದರಗಳು ಕಾಲಾನುಸಾರ ಯಾವುದೇ ಸೂಚನೆ ನೀಡದೆ ಆಯುಕ್ತರಿಂದ ಪರಿಷ್ಕರಿಸಬಹುದಾದ ಅಧಿಕಾರಕ್ಕೆ ಒಳಪಟ್ಟಿರುತ್ತದೆ.

**4.0. ಪರವಾನಿಗೆ ಅಂಗೀಕಾರ ನೀಡುವುದು.**

**4.1. ಪರವಾನಿಗೆಗೆ ಅಂಗೀಕಾರ ಅಥವಾ ನಿರಾಕರಣೆ.**

**4.1.1.** ಅಧಿನಿಯಮದ 303 ಮತ್ತು 304 ನೇ ಪ್ರಕರಣಗಳಿಗೆ ಒಳಪಟ್ಟು ಪ್ರಾಧಿಕಾರವು ಕಟ್ಟಡ ಪರವಾನಿಗೆಗಾಗಿ ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿದ ಬಳಿಕ ಪ್ರಸ್ತಾವನೆಗೆ ಅನುಗುಣವಾಗಿ ಅಥವಾ ಅವಶ್ಯವೆಂದು ಭಾವಿಸಲಾದ ಮಾರ್ಪಾಡುಗಳು ಅಥವಾ ಷರತ್ತುಗಳಿಗೆ

ಒಳಪಟ್ಟು ಪರವಾನಿಗೆಗೆ ಅಂಗೀಕಾರ ನೀಡಬಹುದು ಅಥವಾ ನಿರಾಕರಿಸಬಹುದು ಮತ್ತು ಆ ತರುವಾಯ ತನ್ನ ನಿರ್ಣಯವನ್ನು ಅನುಸೂಚಿ–V-A ಅಥವಾ ಅನುಸೂಚಿ–V-Bಯಲ್ಲಿ ನಿಗದಿತವಾದ ನಮೂನೆಯಲ್ಲಿ ಅರ್ಜಿದಾರನಿಗೆ 30 ದಿನಗೊಳಗಾಗಿ ತಿಳಿಸಬಹುದು.

**4.1.2.** ಪರವಾನಿಗೆ ನೀಡುವ ಸಂದರ್ಭದಲ್ಲಿ ಪ್ರದೇಶದ ಪರಿಸರವನ್ನು ಉತ್ತಮಪಡಿಸುವ ಹಿತಾಸಕ್ತಿಯಿಂದ 200 ಚದರ ಮೀಟರುಗಳಿಗಿಂತ ಹೆಚ್ಚು ಕ್ಷೇತ್ರದ ನಿವೇಶನದಲ್ಲಿ ಕಡೆಯ ಪಕ್ಷ ಎರಡು ಮರಗಳನ್ನಾದರೂ ಬೆಳೆಸಬೇಕೆಂಬ ಷರತ್ತನ್ನು ವಿಧಿಸತಕ್ಕದ್ದು.

**4.1.3.** ಕಟ್ಟಡದ ನಿರ್ಮಾಣದ ವೇಳೆಯಲ್ಲಿ ಧೂಳು, ಭಗ್ನರಾಶಿ ಮತ್ತು ಇತರೆ ಸಾಮಗ್ರಿಗಳು ನಿವೇಶನದ ಒಳಗೆ ಮತ್ತು ಸುತ್ತಲಿನ ಜನರ / ಕಟ್ಟಡಗಳಿಗೆ ಆಗುವ ಹಾನಿಯನ್ನು ತಡೆಗಟ್ಟಲು ಸುರಕ್ಷತೆಗೆ ಅನುಸಾರ ಯಾವುದೇ ಮಾಲೀಕರಾಗಲೀ ಕಟ್ಟಡ ನಿರ್ಮಾಣಗಾರರಾಗಲೀ ಅಥವಾ ಕಟ್ಟಡದ ನಿರ್ಮಾಣ ಭದ್ರತೆವುಳ್ಳ ಇನ್ನಿತರೆ ವ್ಯಕ್ತಿಗಳಾಗಲೀ ಅಗತ್ಯ ಬ್ಯಾರಿಕೇಡ್‌ನ್ನು ಪ್ರಾಧಿಕಾರಿಯ ಅಪೇಕ್ಷೆಯಂತೆ ನಿರ್ಮಿಸುವುದು ಮತ್ತು ನಿರ್ವಹಿಸತಕ್ಕದ್ದು.

**4.2. ಪರಿಷ್ಕೃತ ನಕ್ಷೆಗಳು:–**

(i) ಪ್ರಾಧಿಕಾರವು ನಕ್ಷೆಗಳನ್ನು ಪರಿಶೀಲಿಸಿ ನಕ್ಷೆಗಳಲ್ಲಿ ಮಾರ್ಪಾಡುಗಳನ್ನು ಮತ್ತು ಆಕ್ಷೇಪಣೆಗಳನ್ನು ತೋರ್ಪಡಿಸಿದಲ್ಲಿ ಅರ್ಜಿದಾರನು ಅಂತಹ ಮಾರ್ಪಾಡು ಮತ್ತು ಆಕ್ಷೇಪಣೆಗಳನ್ನು ಮಾನ್ಯಮಾಡಿ ನಕ್ಷೆಗಳನ್ನು ಪರಿಷ್ಕೃತಗೊಳಿಸಿ ಪುನಃ ಸಲ್ಲಿಸತಕ್ಕದ್ದು. ಮಂಜೂರಾತಿಗೆ ಸಲ್ಲಿಸಿರುವ ನಕ್ಷೆಗಳು ಒಂದು ಬರವಣಿಗೆಯ ಮೇಲೆ ಮತ್ತೊಂದು ಕಾಣುವ ತಿದ್ದುಪಡಿಗಳನ್ನು ಹೊಂದಿರಬಾರದು.

(ii) ಒಂದು ಸಲ ಪರವಾನಿಗೆ ನೀಡಿದ ನಕ್ಷೆಗಳನ್ನು ಹೆಚ್ಚುವರಿ ಪರಿಶೀಲನಾಶುಲ್ಕ ಮತ್ತು ನೆಲ ವಿಸ್ತೀರ್ಣವನ್ನು ಅಧಿಕಗೊಳಿಸಿದ ಕಾರಣಕ್ಕಾಗಿ ಹೆಚ್ಚುವರಿ ಶುಲ್ಕವನ್ನು ಸಂದಾಯಮಾಡಬೇಕಾದಲ್ಲಿ ಅಂತಹ ಶುಲ್ಕಗಳನ್ನು ಸಂದಾಯ ಮಾಡಿದ ಬಳಿಕ ಪ್ರಾಧಿಕಾರವು ಪರಿಷ್ಕೃತಗೊಳಿಸಬಹುದು ಅಥವಾ ಮಾರ್ಪಾಡುಮಾಡಬಹುದು. ಕಟ್ಟಡದ ನಿರ್ಮಾಣ ಕಾರ್ಯವು ಪ್ರಾರಂಭವಾದ ಬಳಿಕ ಮಾರ್ಪಾಡು ನಕ್ಷೆಗೆ ಪರವಾನಿಗೆ ನೀಡಿದಾಗ ಮಹಾನಗರ ಪಾಲಿಕೆಯು ನಿಗದಿಪಡಿಸಿದ ಜುಲ್ಮಾನೆಯನ್ನು ಅರ್ಜಿದಾರನು ಪಾವತಿಸತಕ್ಕದ್ದು.

**4.3. ಭದ್ರತಾ ಠೇವಣಿ:–**

(i) ಅಂತಸ್ತುಗಳ ನೆಲವಿಸ್ತೀರ್ಣ ಕ್ಷೇತ್ರದ ಪ್ರತಿ ಚದರ ಮೀಟರಿಗೆ ರೂ. 25/– ರಂತೆ ಬಡ್ಡಿರಹಿತವಾಗಿ ಹಿಂತಿರುಗಿಸಬಹುದಾದ ಕೆಳಕಂಡ ವರ್ಗಗಳ ಕಟ್ಟಡಗಳಿಗಾಗಿ ಮುಂಗಡ ಭದ್ರತಾ ನಿಧಿಯನ್ನು ಠೇವಣಿಯನ್ನಾಗಿ ಅರ್ಜಿದಾರನು ಸಂದಾಯ ಮಾಡತಕ್ಕದು.

ಎ) ಐದು ಮತ್ತು ಅದಕ್ಕಿಂತಲೂ ಹೆಚ್ಚು ವಸತಿ ಘಟಕಗಳನ್ನು ಹೊಂದಿರುವ ಸಮೂಹವಸತಿ/ ಬಹುಸಂಖ್ಯಾವಾಸದ ಕಟ್ಟಡಗಳು/ ಅಪಾರ್ಟ್‌ಮೆಂಟ್‌ಗಳು

ಬಿ) 300.00 ಚ.ಮೀಗಿಂತಲೂ ಹೆಚ್ಚಿನ ಅಂತಸ್ತು ನೆಲ ವಿಸ್ತೀರ್ಣಹೊಂದಿರುವ ವಾಣಿಜ್ಯ ಕಟ್ಟಡಗಳು.

(ii) ಕಟ್ಟಡ ನಿರ್ಮಾಣವು ಪರವಾನಿಗೆ ಪಡೆದ ನಕ್ಷೆಗೆ ಅನುಸಾರವಾಗಿ ಪೂರ್ಣಗೊಂಡಿರುವ ಬಗ್ಗೆ ಪಾಲಿಕೆಯ ಆಯುಕ್ತರು ಪ್ರಮಾಣಿಕರಿಸಿದ ದಿನದಿಂದ ಎರಡು ವರ್ಷಗಳ ನಂತರ ಭದ್ರತ ಠೇವಣಿ ಹಣವನ್ನು ಹಿಂದಿರುಗಿಸತಕ್ಕದ್ದು. ಕಟ್ಟಡ ನಿರ್ಮಾಣವು ಪರವಾನಿಗೆ ಪಡೆದ ನಕ್ಷೆಗೆ ಅನುಸಾರವಾಗಿ ಇಲ್ಲದೆ ಇದ್ದಲ್ಲಿ ಭದ್ರತ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು.

**4.4. ಪ್ರಾಧಿಕಾರದ ವಿಶೇಷ ಅಧಿಕಾರಗಳು:–** ಅಧಿನಿಯಮ ಮತ್ತು ಅಭಿವೃದ್ಧಿ ಯೋಜನೆಗೆ ಅಸಂಬದ್ಧವಾಗದಂತೆ ನಿವೇಶನದ ಮೂಲಕ ಹಾಯ್ದುಹೋಗುವ ಹಾಲಿ ಮತ್ತು ಪ್ರಸ್ತಾವಿತ ವಿದ್ಯುತ್, ನೀರು ಮತ್ತು ಒಳಚರಂಡಿ ಮಾರ್ಗಗಳಿಂದಾಗಿ ಅಥವಾ ನಿವೇಶನದ ಮೂಲಕ ಹಾಯ್ದು ಹೋಗುವ ಯಾವುದೇ ರಸ್ತೆಯ ವಿಸ್ತರಣೆ ಅಥವಾ ಹೊಸರಸ್ತೆಗಳ ನಿರ್ಮಾಣದಿಂದಾಗಿ ಪ್ರಾಧಿಕಾರವು:–

(i) ಪ್ರಸ್ತಾವಿತ ಕಟ್ಟಡದ ಸ್ಥಳವನ್ನು ಬದಲಾಯಿಸುವುದು.

(ii) ಖಾಲಿ ಜಾಗ ಅಥವಾ ಮುಕ್ತವಾಯುಸಂಚಾರ ಸ್ಥಳಗಳನ್ನು ಒದಗಿಸುವುದು.

(iii) ಕಟ್ಟಡ ನಿರ್ಮಾಣಕ್ಕಾಗಿ ವಿಶಿಷ್ಟ ಸಾಮಾಗ್ರಿಗಳನ್ನು ಉಪಯೋಗಿಸುವುದು ಇಂತಹ ಕ್ರಮಗಳು ಅಗತ್ಯವೆನಿಸಿದಲ್ಲಿ ಮಾಲಿಕನಿಗೆ ಅದರಂತೆ ನಿರ್ದೇಶನ ನೀಡಬಹುದು.

**5.0. ಪರವಾನಿಗೆ ನೀಡಿದ ತರುವಾಯ ಅನುಸರಿಸಬೇಕಾದ ಕಾರ್ಯವಿಧಾನ.**

**5.1. ಮಾಲೀಕನ ಜವಾಬ್ದಾರಿ:–** ಕಟ್ಟಡ ನಿರ್ಮಾಣಕ್ಕೆ ಪರವಾನಿಗೆ ಪಡೆದಿದ್ದರೂ, ಕಟ್ಟಡ ನಕ್ಷೆ ಮತ್ತು ಅದರ ವಿವರಗಳಿಗೆ ಅನುಮೋದನೆ ಪಡೆದಿದ್ದರೂ, ಪ್ರಾಧಿಕಾರವು ಸ್ಥಳದ ಪರಿವೀಕ್ಷಣೆ ಮಾಡಿದ್ದರೂ, ಯಾವುದೇ ಸಂದರ್ಭದಲ್ಲಿ ಕಟ್ಟಡ ನಿರ್ಮಾಣಕ್ಕೆ ಪರವಾನಿಗೆ ನೀಡಿರಬಹುದಾದ ಕಟ್ಟಡ ನಕ್ಷೆ ಮತ್ತು ಇದರ ಬಗ್ಗೆ ವಿಧಿಸಿರಬಹುದಾದ ಷರತ್ತುಗಳ ಪ್ರಕಾರ ಕಟ್ಟಡ ನಿರ್ಮಾಣವನ್ನು ಕಾರ್ಯಗತಗೊಳಿಸುವ ಜವಾಬ್ದಾರಿಯಿಂದ ಮಾಲೀಕನು ಬಿಡುಗಡೆ ಹೊಂದುವುದಿಲ್ಲ.

**5.2. ನಿರ್ಮಾಣ ಕಾರ್ಯದ ಪ್ರಾರಂಭ:–**

(i) ಪರವಾನಿಗೆ ನೀಡಿದ ದಿನಾಂಕದಿಂದ ಎರಡು ವರ್ಷಗಳೊಳಗಾಗಿ ಕಟ್ಟಡದ ನಿರ್ಮಾಣ/ಪುನರ್ ನಿರ್ಮಾಣ ಕಾರ್ಯವನ್ನು ಪ್ರಾರಂಭಮಾಡತಕ್ಕದ್ದು. ಎರಡು ವರ್ಷಗಳು ಪೂರ್ಣಗೊಳ್ಳುವ ಮೊದಲೇ ಅನುಸೂಚಿ VIರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕಟ್ಟಡ ನಿರ್ಮಾಣವನ್ನು ಪ್ರಾರಂಭಮಾಡುವ ಇಂಗಿತದ ಬಗ್ಗೆ ಮಾಲಿಕನು ಪ್ರಾಧಿಕಾರಕ್ಕೆ ಸಂದೇಶ ಕಳುಹಿಸಬೇಕು, ತರುವಾಯ ತಳಪಾಯ ಅಥವಾ ಸ್ಥಂಭಗಳ ಆಧಾರಗಳು ಪೂರ್ಣಗೊಂಡ ಮೇಲೆ ಪ್ರಾಧಿಕಾರಕ್ಕೆ ಸಂದೇಶ ಕಳುಹಿಸಬೇಕು.

(ii). ಪರವಾನಿಗೆ ನೀಡಿದ ದಿನಾಂಕದಿಂದ ಎರಡುವರ್ಷಗಳ ಬಳಿಕ ನಿರ್ಮಾಣ/ಪುನರ್ ನಿರ್ಮಾಣದ ಕಾರ್ಯವನ್ನು ಪ್ರಾಧಿಕಾರದಿಂದ ಹೊಸದಾಗಿ ಪರವಾನಿಗೆ ಪಡೆಯದೆ ಪ್ರಾರಂಭಿಸತಕ್ಕದ್ದಲ್ಲ.

**5.3. ಪರಿವೀಕ್ಷಣೆ:–**

(i) ಪರವಾನಿಗೆ ಅಗತ್ಯವಿರುವ ಎಲ್ಲ ನಿರ್ಮಾಣ ಮತ್ತು ಕೆಲಸಗಳು ಸಾಮಾನ್ಯವಾಗಿ ಪ್ರಾಧಿಕಾರದ ಪರಿವೀಕ್ಷಣೆಗೆ ಒಳಪಡತಕ್ಕದ್ದು ಮತ್ತು ಅಸಾಧಾರಣವಾಗಿ ಅಪಾಯಕ್ಕೆ ಗುರಿಮಾಡಬಹುದಾದ ಹಾಗೂ ಸತತ ಪರಿವೀಕ್ಷಣೆ ಅಗತ್ಯವಿರುವ ಕೆಲವು ರೀತಿಯ ನಿರ್ಮಾಣಗಳು ಪ್ರಾಧಿಕಾರದ ನಿರಂತರ ಪರಿವೀಕ್ಷಣೆಗೆ ಒಳಪಡತಕ್ಕದ್ದು.

(ii) ಉಪವಿಧಿ 5.2 ರನ್ವಯ ಸಂದೇಶ ತಲುಪಿದ 15 ದಿನಗಳ ಅವಧಿಯಲ್ಲಿ ಅನುಮೋದಿಸಿರುವ ನಕ್ಷೆಯಪ್ರಕಾರ ಕಟ್ಟಡದ ರೂಪರೇಖೆಯನ್ನು ನಿವೇಶನದ ಮೇಲೆ ಗುರ್ತುಮಾಡಿರುವುದನ್ನು ತಪಾಸಣೆಮಾಡಲು ಪ್ರಾಧಿಕಾರವು ಸ್ಥಳಪರಿವೀಕ್ಷಣೆ ನಡೆಸತಕ್ಕದ್ದು. ಅನುಸೂಚಿ vii ರಲ್ಲಿನ ನಮೂನೆಯ ಪ್ರಕಾರ ಪ್ರಾರಂಭಿಕ ಪ್ರಮಾಣಪತ್ರವನ್ನು ನೀಡಿದ ನಂತರ ಮಾಲಿಕನು ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಬಹುದು.

(iii) ಮಾಲಿಕನು ಸಂದೇಶ ನೀಡಿದ 15 ದಿನಗಳೊಳಗಾಗಿ ಪ್ರಾರಂಭಿಕ ಪ್ರಮಾಣಪತ್ರವನ್ನು ನೀಡದೆ ಇದ್ದಲ್ಲಿ ನಿರ್ಮಾಣ ಕಾರ್ಯವನ್ನು ಅನುಮೋದಿತ ನಕ್ಷೆಯ ಪ್ರಕಾರ ಮುಂದುವರಿಸಬಹುದು.

**5.4. ನಿವೇಶನದ ಬಳಿ ದಾಖಲೆ ಪತ್ರಗಳು:–** ಯಾವುದೇ ವಸ್ತುಗಳ ಪರೀಕ್ಷೆಯು ಈ ಕಟ್ಟಡ ಉಪವಿಧಿಗಳ ಅಗತ್ಯಗಳನ್ನು ಅಥವಾ ಪರವಾನಿಗೆಯೂ ಷರತ್ತುಗಳನ್ನು ದೃಢಪಡಿಸಬೇಕಾದ ಅಗತ್ಯವಿದ್ದಲ್ಲಿ ಎಲ್ಲಾ ಸಮಯದಲ್ಲಿಯೂ ನಿರ್ಮಾಣದ ಅವಧಿಯಲ್ಲಿ ಮತ್ತು ಪ್ರಾಧಿಕಾರವು ಅಗತ್ಯಪಡಿಸುವ ನಂತರದ ಅವಧಿಯಲ್ಲಿ ಅಂತಹ ಪರೀಕ್ಷೆಯ ಅಂಕಿ ಸಂಖ್ಯೆಯ ಮಾಹಿತಿಯನ್ನು ಒದಗಿಸುವ ದಾಖಲೆಯನ್ನು ಪ್ರಾಧಿಕಾರದ ಪರಿವೀಕ್ಷಣೆಗಾಗಿ ಇಟ್ಟಿರ ತಕ್ಕದ್ದು.

**5.5. ನಿರ್ಮಾಣದ ನಿವೇಶನದಲ್ಲಿ ಅನುಮೊದಿತ ನಕ್ಷೆ ಮತ್ತು ಪರವಾನಿಗೆ ಆದೇಶ ಪ್ರದರ್ಶನ.**

1. ಪರವಾನಿಗೆ ಪಡೆದ ಸ್ಥಳದ ಎದ್ದುಕಾಣುವ ಪ್ರದೇಶದಲ್ಲಿ ಮಾಲೀಕ/ ನಿರ್ಮಾಪಕ/ ಗುತ್ತಿಗೆದಾರನು ನಿರ್ಮಾಣದ ಅವಧಿಯಲ್ಲಿ ಕೆಳಕಂಡ ದಾಖಲೆಗಳನ್ನು ಪ್ರದರ್ಶನಕ್ಕೆ ಇಟ್ಟಿರತಕ್ಕದ್ದು.
   ಎ) ಕಟ್ಟಡ ಪರವಾನಿಗೆ ಆದೇಶದ ಪ್ರತಿ.
   ಬಿ) ಪರವಾನಿಗೆ ಪಡೆದು ನಿರ್ಮಿಸ ಬೇಕಾಗಿರುವ ಕಟ್ಟಡದ ಅನುಮೋದಿತ ನಕ್ಷೆ ಮತ್ತು ಕಟ್ಟಡದ ವಿವರಗಳ ಪ್ರತಿ.
2. ಕಟ್ಟಡ ಪರವಾನಿಗೆ ಆದೇಶ ಮತ್ತು ವಿವರಗಳೊಂದಿಗೆ ಅನುಮೋದಿತ ನಕ್ಷೆಗಳ ಪ್ರತಿಗಳನ್ನು ಒಂದು ಚೌಕಟ್ಟಿನಲ್ಲಿ ನೆಲೆಗೊಳಿಸತಕ್ಕದ್ದು ಮತ್ತು ಪ್ರದರ್ಶಿಸ ತಕ್ಕದ್ದು ಮತ್ತು ಅವುಗಳನ್ನು ಪರಿವೀಕ್ಷಣೆಯ ಸಮಯದಲ್ಲಿ ಲಭ್ಯವಾಗಿರಿಸತಕ್ಕದ್ದು.

**5.6. ಅಧಿಭೋಗ ಪ್ರಮಾಣ ಪತ್ರ:–**

**5.6.1.** (ಎ) ಕಟ್ಟಡ ನಿರ್ಮಾಣಕ್ಕೆ ಪರವಾನಿಗೆ ನೀಡಿದ ಐದು ವರ್ಷಗಳೊಳಗಾಗಿ ಪರವಾನಿಗೆ ಪಡೆದ ಕಟ್ಟಡದ ನಿರ್ಮಾಣ ಅಥವಾ ಪುನರ್ ನಿಮಾಣ ಕಾರ್ಯವನ್ನು ಪ್ರತಿ ವ್ಯಕ್ತಿಯು ಪೂರ್ಣಗೊಳಿಸ ತಕ್ಕದ್ದು, ನಿರ್ಮಾಣ ಕಾರ್ಯವು ಪೂರ್ಣಗೊಂಡ ಒಂದು ತಿಂಗಳ ಅವಧಿಯಲ್ಲಿ ಅನುಸೂಚಿ VIIIರ ಮಾದರಿಯ ಪ್ರಕಾರ ನೊಂದಾಯಿತ ವಾಸ್ತುಶಿಲ್ಪಿ / ಇಂಜಿನಿಯರ್ /ಮೇಲ್ವಿಚಾರಕರಿಂದ ನೀಡಲ್ಪಟ್ಟ ಪ್ರಮಾಣ ಪತ್ರಗಳೊಂದಿಗೆ ಕಟ್ಟಡ ನಿರ್ಮಾಣವು ಪೂರ್ಣಗೊಂಡಿರುವ ಬಗ್ಗೆ ಆಯುಕ್ತರಿಗೆ ಸಂದೇಶ ಕಳುಹಿಸ ತಕ್ಕದ್ದು ಮತ್ತು ಕಟ್ಟಡವನ್ನು ಅಧಿಭೋಗಿಸಲು ಪರವಾನಿಗೆಗಾಗಿ ಅರ್ಜಿ ಸಲ್ಲಿಸ ತಕ್ಕದ್ದು. ಕಟ್ಟಡವನ್ನು ಸಕಾಲದಲ್ಲಿ ವಾಸ್ತವಿಕವಾಗಿ ಪರಿವೀಕ್ಷಣೆ ಮಾಡಿದ ಬಳಿಕ (ಕರ್ನಾಟಕ ಮುನ್ಸಿಪಲ್ ಕಾರ್ಪೊರೇಷನ್ ಅಧಿನಿಯಮ 1976ರ ಪ್ರಕರಣ 300 ರ ಅನ್ವಯ ಪ್ರಾರಂಭಿಕ ಪ್ರಮಾಣ ಪತ್ರವನ್ನು ಪಡಿಯಲಾಗಿದೆಯೇ, ಮತ್ತು ಅರ್ಜಿಯನ್ನು ಸಲ್ಲಿಸಿದಾಗ ಅಗ್ನಿಶಾಮಕ ಇಲಾಖೆಯಿಂದ ಎತ್ತರಿಸಿದ ಕಟ್ಟಡಗಳ ಬಗ್ಗೆ ಮುಕ್ತತೆ ಪತ್ರದ ಸಹಿತ ಅಗತ್ಯವಾದ ಎಲ್ಲಾ ದಾಖಲಾತಿಗಳನ್ನು ಸಲ್ಲಿಸಿಲಾಗಿದೆಯೇ ಎಂಬ ಬಗ್ಗೆ ಪರಿಶೀಲಿನೆಯೂ ಒಳಗೊಂಡಂತೆ)ಸಂದೇಶ ತಲುಪಿದ ಮೂವತ್ತು ದಿನಗಳೊಳಗಾಗಿ ಅಧಿಭೊಗ ಪ್ರಮಾಣ ಪತ್ರದ ಅರ್ಜಿಯನ್ನು ಒಪ್ಪಿ ಕೊಂಡಿರುವ ಅಥವಾ ನಿರಾಕರಿಸಿರುವ ಬಗ್ಗೆ ಅರ್ಜಿದಾರರಿಗೆ ಮಾಹಿತಿ ಕಳುಹಿಸತಕ್ಕದ್ದು. ಕಟ್ಟಡವನ್ನು ಅನುಮೋದಿಸಿರುವ ನಕ್ಷೆಯ ಪ್ರಕಾರ ನಿರ್ಮಿಸಿದ್ದ ಪಕ್ಷದಲ್ಲಿ ಹಾಗೂ ಅರ್ಜಿಯನ್ನು ಅಂಗೀಕರಿಸಿದಲ್ಲಿ ಅನುಸೂಚಿ IX. ರಲ್ಲಿನ ಮಾದರಿಯ ಪ್ರಕಾರ ಅಧಿಭೋಗ ಪ್ರಮಾಣ ಪತ್ರವನ್ನು ನೀಡತಕ್ಕದ್ದು.

**(ಬಿ)** ವಾಸ್ತವಿಕ ಪರಿವೀಕ್ಷಣೆ ಎಂದರೆ ಕಟ್ಟಡವನ್ನು ಎಲ್ಲಾ ವಿಧಿಗಳಲ್ಲಿಯೂ ಅನುಮೋದಿತ ನಕ್ಷೆ ಮತ್ತು ಕಟ್ಟಡ ಉಪವಿಧಿಗಳ ಅಗತ್ಯಗಳಿಗೆ ಅನುಗುಣವಾಗಿ ಕಟ್ಟಲಾಗಿದೆಯೇ, ಎಂಬುದನ್ನು ಪ್ರಾಧಿಕಾರವು ನಿರ್ಣಯಿಸುವ ಒಂದು ಕ್ರಮವಾಗಿರುತ್ತದೆ ಮತ್ತು ಅಗತ್ಯವಿದ್ದಲ್ಲಿ ಅಗ್ನಿಶಾಮಕ ಇಲಾಖೆಯ ಪರಿವೀಕ್ಷಣೆಯು ಇದರಲ್ಲಿ ಒಳಗೊಳ್ಳುತ್ತದೆ.

**(ಸಿ)** ಕಟ್ಟಡದ ನಿರ್ಮಾಣ ಅಥವಾ ಪುನರ್ ನಿರ್ಮಾಣವನ್ನು ಅಂತಹ ನಿರ್ಮಾಣಕ್ಕೆ ಪರವಾನಿಗೆ ನೀಡಿದ ಐದು ವರ್ಷಗಳಳೊಗಾಗಿ ಪೂರ್ಣಗೊಳಿಸದಿದ್ದರೆ ಐದು ವರ್ಷಗಳ ಅವಧಿಯು ಮುಕ್ತಾಯವಾದ ಸಂದರ್ಭದಲ್ಲಿನ ನಿರ್ಮಾಣದ ಹಂತವನ್ನು ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು, ಐದು ವರ್ಷಗಳ ಅವಧಿಯು ಮುಕ್ತಾಯವಾದ ಬಳಿಕ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕಟ್ಟಡ ನಿರ್ಮಾಣವನ್ನು ಮುಂದುವರಿಸ ಬಾರದು. ಕಟ್ಟಡ ನಿರ್ಮಾಣ ಅಥವಾ ಪುನರ್ ನಿರ್ಮಾಣವನ್ನು ಅನುಮೋದಿತ ನಕ್ಷೆಯ ಪ್ರಕಾರ ಕಾರ್ಯಗತ ಗೊಳಿಸಿದ್ದಲ್ಲಿ ಮತ್ತು ಪರವಾನಿಗೆ ನೀಡಿರುವ ಅಂತಸ್ತು ನೆಲ ವಿಸ್ತೀರ್ಣದಲ್ಲಿ ಶೇಕಡ 75 ರ ಭಾಗವನ್ನು ಐದು ವರ್ಷಗಳು ಮುಕ್ತಾಯವಾಗುವ ಮೊದಲೇ ಪೂರ್ಣಗೊಳಿಸಿರುವುದಾಗಿ ಪ್ರಾಧಿಕಾರಕ್ಕೆ ಮನವರಿಕೆಯಾದಲ್ಲಿ ಕಟ್ಟಡ ನಿರ್ಮಾಣವನ್ನು ಮುಂದುವರಿಸಲು ಪರವಾನಿಗೆ ನೀಡಬಹುದು. ಇಲ್ಲದಿದ್ದಲ್ಲಿ ಪ್ರಾಧಿಕಾರದಿಂದ ಹೊಸದಾಗಿ ಪರವಾನಿಗೆ ಪಡೆದು ಅದರಂತೆ ನಿರ್ಮಾಣ ಕಾರ್ಯವನ್ನು ಮುಂದುವರಿಸ ತಕ್ಕದ್ದು.

**5.6.2.** ಎಲ್ಲ ಎತ್ತರಿಸಿದ ಕಟ್ಟಡಗಳ ಸಂಬಂಧದಲ್ಲಿ ನಿರ್ಮಾಣವು ಕರ್ನಾಟಕ ಅಗ್ನಿಶಾಮಕ ಇಲಾಖೆಯ ಅಧಿಕಾರಿಗಳಿಂದ ಪರಿವೀಕ್ಷಣೆಗೆ ಒಳಪಡುವ ನಿಬಂಧನೆಗೆ ಒಳಪಟ್ಟಿರುತ್ತದೆ ಮತ್ತು ಅಧಿಭೋಗ ಪ್ರಮಾಣ ಪತ್ರವನ್ನು ಅಗ್ನಿಶಾಮಕ ಸೇವೆಯ ನಿರ್ದೇಶಕರಿಂದ ಮುಕ್ತತೆ ಪ್ರಮಾಣ ಪತ್ರವನ್ನು ಪಡೆದ ಬಳಿಕವೇ ನೀಡತಕ್ಕದ್ದು.

**5.7. ಹೊಸ ಕಟ್ಟಡಗಳನ್ನು ಅಧಿಭೋಗಕ್ಕೆ ಪಡೆಯುವುದು ಮತ್ತು ಬಾಡಿಗೆಗೆ ಕೊಡುವುದು:–** ಯಾವೊಬ್ಬ ವ್ಯಕ್ತಿಯು ಯಾವುದೇ ಹೊಸಕಟ್ಟಡವನ್ನು ಅಥವಾ ಹೊಸಕಟ್ಟಡದ ಒಂದು ಭಾಗವನ್ನು ಯಾವುದೇ ರೀತಿಯ ಉದ್ದೇಶಕ್ಕಾಗಿ ಅಂತಹ ಕಟ್ಟಡಗಳು ಅಥವಾ ಅವುಗಳ ಭಾಗಗಳಿಗೆ ಅಧಿಭೋಗ ಪ್ರಮಾಣ ಪತ್ರವನ್ನು ನೀಡುವವರೆಗಿಗೆ ಅಂದರೆ ಅಂತಹ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿರುವ ಅಧಿಕಾರಿಯು ಕಟ್ಟಡವು ಪರವಾನಿಗೆ ಪಡೆದ ನಕ್ಷೆಯ ಪ್ರಕಾರ ಪೂರ್ಣಗೊಂಡಿದೆ ಮತ್ತು ಯಾವ ಉದ್ದೇಶಕ್ಕಾಗಿ ನಿರ್ಮಿಸಲಾಗಿದೆಯೋ ಆ ಉದ್ದೇಶಕ್ಕಾಗಿ ಅದನ್ನು ಬಳಸಲು ಅರ್ಹವಾಗಿದೆ ಎಂದು ಪ್ರಮಾಣೀ ಕರಿಸುವವರೆಗಿಗೂ ಉಪಯೋಗಿಸಿ ಕೊಳ್ಳತಕ್ಕದಲ್ಲ. ಪ್ರಾಧಿಕಾರವು ವಿಶೇಷ ಸಂದರ್ಭಗಳಲ್ಲಿ (ಕಾರಣಗಳನ್ನು ದಾಖಲಿಸಿದ ತರುವಾಯ) ವಿವಿಧ ಅಂತಸ್ತುಗಳಿಗೆ ಭಾಗಶಃ ಅಧಿಭೋಗ ಪ್ರಮಾಣ ಪತ್ರವನ್ನು ನೀಡಬಹುದು.

**6.0. ನಿರ್ಮಾಣದ ಸಮಯದಲ್ಲಿ ಬದಲಾವಣೆಗಳು.**

(i) ಯಾವುದೇ ನಿರ್ಮಾಣದಲ್ಲಿ ಮಂಜೂರಾದ ನಕ್ಷೆಯನ್ನು ಉಲ್ಲಂಘಿಸಿದ್ದರೆ ಅಥವಾ ಬದಲಾಯಿಸಿದ್ದರೆ, ಅಂತಹ ಉಲ್ಲಂಘನೆ ಅಥವಾ ಬದಲಾವಣೆಯು

(1) ಕಟ್ಟಡದ ಸುತ್ತಲೂ ಬಿಡಬೇಕಾದ ನಡುಜಾಗ.

(2) ನಿವೇಶನದ ಆವೃತಪ್ರದೇಶ.

(3) ಅಂತಸ್ತು ವಿಸ್ತೀರ್ಣ ಅನುಪಾತ ಮತ್ತು

(4) ಕಟ್ಟಡ ಎತ್ತರ ಇವುಗಳ ಶೇಕಡ 5 ಕ್ಕಿಂತ ಕಡಿಮೆ ಪ್ರಮಾಣದಲ್ಲಿ ಇದ್ದಲ್ಲಿ ಮತ್ತು ಅಧಿನಿಯಮದ ಅಧ್ಯಾಯ XV ರ ಮೇರೆಗೆ ಕಟ್ಟಡದ ಭದ್ರತೆಗೆ ಧಕ್ಕೆಯುಂಟಾಗದಂತೆ ಅದನ್ನು ಒಡೆಯುವುದು ಸೂಕ್ತವಲ್ಲವೆಂದು ಆಯುಕ್ತರು ಭಾವಿಸಿದರೆ ಅಂತಹ ಉಲ್ಲಂಘನೆ ಅಥವಾ ಬದಲಾವಣೆಗಳನ್ನು ಸವಿವರವಾದ ಕಾರಣಗಳನ್ನು ದಾಖಲಿಸಿ ಕ್ರಮ ಬದ್ಧಗೊಳಿಸಬಹುದು.

(ii) ಉಲ್ಲಂಘನೆ ಅಥವಾ ಬದಲಾವಣೆಯನ್ನು ದಾಖಲಿಸಿ ತಯಾರಿಸಿರುವ ಮಾರ್ಪಡಿಸಿದ ನಕ್ಷೆಗೆ ಮಂಜೂರಾತಿ ನೀಡಿದ ಮಹಾನಗರ ಪಾಲಿಕೆಯ ಕಾಲಾನುಸಾರ ನಿಗದಿಪಡಿಸಿದ ಶುಲ್ಕವನ್ನು ವಿಧಿಸಿದ ಬಳಿಕವೇ ಉಲ್ಲಂಘನೆ ಅಥವಾ ಬದಲಾವಣೆಯನ್ನು ಕ್ರಮಬದ್ಧ ಗೊಳಿಸಬಹುದು.

(iii) ಈ ಉಪವಿಧಿಯ ಮೇರೆಗಿನ ಉಲ್ಲಂಘನೆ ಅಥವಾ ಬದಲಾವಣೆಗಳು ಯಾವುದೇ ನಕ್ಷೆಗೆ ಪರವಾನಿಗೆ ಪಡೆಯದೆ ನಿರ್ಮಿಸಿದ ಕಟ್ಟಡಗಳಿಗೂ ಹಾಗೂ ಪರವಾನಿಗೆ ಪಡೆದ ನಕ್ಷೆಗಳಲ್ಲಿ ನಿರ್ದಿಷ್ಟವಾಗಿ ತೆಗೆದುಹಾಕಿದ್ದರೂ ಅಥವಾ ತಿರಸ್ಕರಿಸಿದ್ದರೂ ಮಾಡಿರುವ ಉಲ್ಲಂಘನೆ ಅಥವಾ ಬದಲಾವಣೆಗಳನ್ನು ಹೊಂದಿರುವ ಕಟ್ಟಡಗಳಿಗೂ ಅನ್ವಯಿಸುವುದಿಲ್ಲ.

## ಭಾಗ –III

## ಕಟ್ಟಡದ ಸಾಮಾನ್ಯ ಅಗತ್ಯಗಳು

**7.0. ಕಟ್ಟಡ ನಿವೇಶನಗಳ ಅಗತ್ಯಗಳು:–**

**7.1.** ಜಮೀನಿನ ಯಾವುದೇ ಭಾಗವನ್ನು ಕೆಳಕಂಡ ಸಂದರ್ಭಗಳಲ್ಲಿ ಕಟ್ಟಡಗಳನ್ನು ನಿರ್ಮಿಸಲು ಸೂಕ್ತವಾದ ನಿವೇಶನವೆಂದು ಉಪಯೋಗಿಸತಕ್ಕದ್ದಲ್ಲ.

ಎ) ಆ ನಿವೇಶನದಲ್ಲಿ ಚರಂಡಿ ವ್ಯವಸ್ಥೆ ಇಲ್ಲದಿದ್ದಲ್ಲಿ ಅಥವಾ ಚರಂಡಿ ವ್ಯವಸ್ಥೆ ಮಾಡಲು ಸಾಧ್ಯವಾಗದಿದ್ದಲ್ಲಿ;

ಬಿ) ನಿವೇಶನದಲ್ಲಿ ನೈರ್ಮಲ್ಯಕರ ಪರಿಸರದಲ್ಲಿಲ್ಲವೆಂಬುದಾಗಿ ಅಥವಾ ಅದರ ಮೇಲೆ ಕಟ್ಟಡ ನಿರ್ಮಿಸುವುದು ಅಪಾಯಕಾರಿ ಎಂಬುದಾಗಿ ಪ್ರಾಧಿಕಾರವು ಅಭಿಪ್ರಾಯ ಪಟ್ಟಲ್ಲಿ;

ಸಿ) ಮಹಾನಗರ ಪಾಲಿಕೆಯ ಆರೋಗ್ಯ ಅಧಿಕಾರಿ ಮತ್ತು ಇಂಜಿನಿಯರಿಂದ ಆರೋಗ್ಯ ಮತ್ತು ನೈರ್ಮಲ್ಯದ ದೃಷ್ಠಿಯಿಂದ ನಿವೇಶವು ಕಟ್ಟಡ ನಿರ್ಮಿಸಲು ಮುಕ್ತವಾಗಿದೆ ಎಂಬುದರ ಬಗ್ಗೆ ಪ್ರಮಾಣ ಪತ್ರ ಪಡೆಯದೆ ಹೊಲಸು ಮತ್ತು ಹಾನಿಕಾರಕ ವಸ್ತುಗಳಿಂದ ಕೂಡಿದ ಯಾವುದೇ ಪ್ರದೇಶದಲ್ಲಿ ಕಟ್ಟಡವನ್ನು ನಿರ್ಮಿಸಲು ಉದ್ದೇಶಿಸಿದ ಸಂದರ್ಭದಲ್ಲಿ;

ಡಿ) ಪೂರ್ಣವಾಗಿ ತುಂಬಿದ ಒಂದು ಕೆರೆಯ ನೀರು ಹರಿಡಿರುವ ಪ್ರದೇಶದಿಂದ ನಿವೇಶನವು ಒಂಬತ್ತು ಮೀಟರ್ ಅಂತರದೊಳಗೆ ಇದ್ದಲ್ಲಿ;

ಇ) ಕಟ್ಟಡ ನಿರ್ಮಾಣವು ಸದಾಕಾಲವೂ ತೇವವಾಗಿರದ ರೀತಿಯಲ್ಲಿ ಸುರಕ್ಷಿತ ವಾಗಿಡಲು ಅಗತ್ಯವಾಗಿ ತೆಗೆದುಕೊಳ್ಳ ಬೇಕಾದ ಎಲ್ಲ ವಿಧಾನಗಳನ್ನು ಪ್ರಾಧಿಕಾರಕ್ಕೆ ತೃಪ್ತಿಯಾಗುವಂತೆ ಕಟ್ಟಡದ ಮಾಲಿಕನು ತೋರಿಸಿಕೊಡದಿದ್ದಲ್ಲಿ;

ಎಫ್) ಕಛೇರಿ ಅಥವಾ ಶಾಲೆಯನ್ನು ಒಳಗೊಂಡಂತೆ ಸಾರ್ವಜನಿಕ ಕಟ್ಟಡ, ಥಿಯೇಟರ್ ಅಥವಾ ಸಭಾಂಗಣದ ಉದ್ದೇಶಕ್ಕೆ ಪ್ರಸ್ತಾವನೆ ಇರುವ ನಿವೇಶನದಲ್ಲಿ ಇದಕ್ಕೆ ಮೊದಲು ಪ್ರಾಧಿಕಾರವು ಅಂತಹ ಪ್ರಸ್ತಾವನೆಗೆ ಅನುಮೋದನೆ ನೀಡದೆ ಇದ್ದಲಿ;

ಜಿ) ಆ ನಿವೇಶನದಲ್ಲಿ ಸಾರ್ವಜನಿಕ ಪೂಜೆಗಾಗಿ ಕಟ್ಟಡವನ್ನು ನಿರ್ಮಿಸಲು ಉದ್ದೇಶಿಸಿದ್ದು, ಅಂತಹ ಕಟ್ಟಡದ ಸಾನ್ನಿಧ್ಯದಲ್ಲಿ ಇರುವ ಯಾವುದೇ ವರ್ಗದ ಜನರ ಮತೀಯ ಭಾವನೆಗಳಿಗೆ ಅಪಚಾರ ಉಂಟಾಗ ಬಹುದೆಂದು ಪ್ರಾಧಿಕಾರವು ಅಭಿಪ್ರಾಯಪಟ್ಟಲ್ಲಿ;

ಹೆಚ್) ಸದರಿ ನಿವೇಶನವನ್ನು ಕಾರ್ಖಾನೆ, ಉಗ್ರಾಣ ಅಥವಾ ಕಾರ್ಯಾಗಾರದ ಸ್ಥಾಪನೆಗೆ ಬಳಸಿಕೊಳ್ಳಲು ಉದ್ದೇಶಿಸಲಾಗಿದ್ದು, ಅದರ ಸ್ಥಾಪನೆಯಿಂದ ಅಕ್ಕ–ಪಕ್ಕದ ನಿವಾಸಿಗಳ ಆರೋಗ್ಯ ಮತ್ತು ನೆಮ್ಮದಿಗೆ ತೊಂದರೆಯುಂಟಾಗುತ್ತದೆ ಎಂದು ಪ್ರಾಧಿಕಾರವು ಅಭಿಪ್ರಾಯಪಟ್ಟಲ್ಲಿ;

ಐ) ಅಭಿವೃದ್ಧಿ ಯೋಜನೆ ಮತ್ತು ವಲಯ ನಿಭಂದನೆಗಳ ಕಟ್ಟುಪಾಡುಗಳನ್ನು ನಿವೇಶನವು ಉಲ್ಲಂಘಿಸಿದಲ್ಲಿ ಮತ್ತು

ಜೆ) ಜಮೀನೂ ರೆವಿನ್ಯೂ ನಿವೇಶನವಾಗಿದ್ದು ಕರ್ನಾಟಕ ಭೂ ಕಂದಾಯ ಅಧಿನಿಯಮ 1964. ಇದರ 95ನೇ ಪ್ರಕರಣದ ಅಡಿಯಲ್ಲಿ ಅನುಮತಿ ಪಡೆಯದಿದ್ದಲ್ಲಿ;

**ಸೂಚನೆ:–** (i) ಕೆಲಸಗಾರರನ್ನು ನಿಯೋಜಿಸಿಕೊಳ್ಳಲು ಮತ್ತು ವಿದ್ಯುಚ್ಛಕ್ತಿಯನ್ನು ಬಳಸಲು ಉದ್ದೇಶಿಸಿರುವಂತಹ ಕಾರ್ಖಾನೆ ಮತ್ತು ಕಾರ್ಯಗಾರಗಳ ಕಟ್ಟಡಗಳ ನಿರ್ಮಾಣಕ್ಕಾಗಿ ಸಲ್ಲಿಸುವ ಪ್ರತಿ ಅರ್ಜಿಯು ಅಧಿನಿಯಮದ 354 ರ ಪ್ರಕರಣದ ಷರತ್ತುಗಳನ್ನು ಪೂರೈಸತಕ್ಕದ್ದು ಮತ್ತು ಅದರ ಮೇರೆಗೆ ನಿರ್ದಿಷ್ಟ ಅನುಮತಿಯನ್ನು ಪಡೆಯತಕ್ಕದ್ದು.

(ii) ನಿವೇಶನದಲ್ಲಿ ಪ್ರಸ್ತಾಪಿಸಿರುವ ಕಟ್ಟಡದ ಉಪಯೋಗವು ಅಭಿವೃದ್ಧಿ ಯೋಜನೆಯ ಮತ್ತು ವಲಯ ನಿಬಂಧನೆಗಳ ಭೂ ಉಪಯೋಗದ ಪ್ರಸ್ತಾವನೆಗೆ ಅನುಸಾರವಾಗಿ ಇಲ್ಲದಿದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ (ಎ). ಭೂ ಉಪಯೋಗದ ಬದಲಾವಣೆಗೆಗಾಗಿ ಮತ್ತು (ಬಿ). ನಿವೇಶನದ ವಿಭಜನೆಗಾಗಿ ಅನುಮತಿಯನ್ನು ಒದಗಿಸತಕ್ಕದ್ದು;

**7.2.** ಐವತ್ತು ಚ.ಮೀಗಿಂತ ಕಡಿಮೆ ಕ್ಷೇತ್ರ ಹೊಂದಿರುವ ಮತ್ತು ಆರು ಮೀಟರ್ ಗಿಂತ ಕಡಿಮೆ ಅಗಲವಿರುವ ನಿವೇಶನದಲ್ಲಿ ಪ್ರತ್ಯೇಕ ವಾಸದ ಕಟ್ಟಡದ ನಿರ್ಮಾಣ ನಕ್ಷೆಗೆ ಪರವಾನಿಗೆ ನೀಡತಕ್ಕದಲ್ಲ. ಆರ್ಥಿಕವಾಗಿ ಹಿಂದುಳಿದ,ಕಡಿಮೆ ವರಮಾನದವರಿಗಾಗಿ ನಿರ್ಮಿಸುವ ವಸತಿ ಯೋಜನೆ, ಕೊಳಚೆ ನಿರ್ಮೂಲನೆ ಮತ್ತು ಅಭಿವೃದ್ಧಿ ಯೋಜನೆಗಳು, ಅಧಿಕ ಸಾಂದ್ರತೆ ಹೊಂದಿರುವ ಪ್ರದೇಶಗಳಲ್ಲಿ ಪುನರ್ ನಿರ್ಮಾಣದ ಕಾರ್ಯಗಳು, ಮತ್ತು ಕುಟುಂಬ ಪಾಲುಗಾರಿಕೆಯಿಂದಾಗಿ ವಿಭಜನೆ ಹೊಂದಿದ ನಿವೇಶನಗಳು, ಈ ನಿಶ್ಚಿತ ಪ್ರಕರಣಗಳ ನಿವೇಶನಗಳಲ್ಲಿ ಪ್ರಾಧಿಕಾರವು ಮೇಲಿನ ಷರತ್ತುಗಳನ್ನು ಸಡಿಲ ಗೊಳಿಸಬಹುದು.

**7.3.** ನಿವೇಶನಗಳು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಅನುಮೋದಿಸಿರುವ ವಿನ್ಯಾಸ (ಲೇಔಟ್)ಗಳಲ್ಲಿ ಸ್ಥಾಪಿತವಾಗಿಲ್ಲದೆ ಇದ್ದಲ್ಲಿ ಅಂತಹ ನಿವೇಶನಗಳ ವಿಭಜನೆಗೆ ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮದ1961, ಇದರ 17ನೇ ಪ್ರಕರಣದ ಅಡಿಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆದಿರತಕ್ಕದ್ದು.

**7.4.** **ವಿದ್ಯುತ್ ತಂತಿಗಳಿಂದ ಕಟ್ಟಡದ ದೂರ:**

ಯಾವುದೇ ಕಟ್ಟಡವನ್ನು ವಿದ್ಯುತ್ ತಂತಿಗಳ ಕೆಳಭಾಗದಲ್ಲಿ ಹಾಗೂ ಕೋಷ್ಠಕ 3 ರಲ್ಲಿ ನಮೂದಿಸಿರುವ ಸಮತಲದ ಅಳತೆಗಿಂತಲೂ ಕಡಿಮೆ ಅಂತರದಲ್ಲಿ ನಿರ್ಮಿಸ ಬಾರದು. ಕನಿಷ್ಟ ಸಮತಲದ ಅಂತರಕ್ಕೆ ಅನುಗುಣವಾಗಿ ವಿದ್ಯುತ್ ತಂತಿಗಳು ಮತ್ತು ಕಟ್ಟಡದ ಅತೀ ಎತ್ತರದ ಮೇಲ್ಮೈ ನಡುವೆ ಇರಬೇಕಾದ ಅಂತರವು ಕೋಷ್ಠಕ 3 ರಲ್ಲಿ ನಮೂದಿಸಿರುವಂತೆ ಇರತಕ್ಕದ್ದು, ಸಮತಲದ ಅಂತರವು ನಿಗದಿ ಪಡಿಸಿರುವ ಕನಿಷ್ಟ ಅಳತೆಗಿಂತಲೂ ಹೆಚ್ಚಾದಲ್ಲಿ ಕನಿಷ್ಟ ಲಂಬದ ಅಂತರ ಅನ್ವಯಿಸುವುದಿಲ್ಲ.

**ಕೋಷ್ಠಕ – 3**

**(ಉಪವಿಧಿ ಸಂಖ್ಯೆ–7.4 )**

**ವಿದ್ಯುತ್ ತಂತಿಗಳಿಂದ ಕಟ್ಟಡದ ದೂರ**

| | ವಿದ್ಯುತ್ ತಂತಿಗಳು | ಲಂಬವಾದ ಅಂತರ ಮೀಟರ್‌ಗಳಲ್ಲಿ | ಸಮತಲವಾದ ಅಂತರ ಮೀಟರ್‌ಗಳಲ್ಲಿ |
|---|---|---|---|
| (ಎ) | 11 ಕಿಲೋವಾಟ್ಸ್‌ವರೆಗಿನ ಕಡಿಮೆ ಹಾಗೂ ಮಧ್ಯಮ ವೋಲ್ಟೇಜಿನ ತಂತಿ ಮಾರ್ಗ | 2.50 | 1.20 |
| (ಬಿ) | 11 ಕಿಲೋವಾಟ್ಸ್‌ವರೆಗೆ ಮತ್ತು ಒಳಗೊಂಡಂತೆ ಭಾರಿ ವೋಲ್ಟೇಜ್ ತಂತಿ ಮಾರ್ಗ (ಹೆಚ್.ಟಿ.) | 3.70 | 1.20 |
| (ಸಿ) | 11 ಕಿಲೋವಾಟ್ಸ್‌ಗಿಂತ ಹೆಚ್ಚು ಮತ್ತು 33 ಕಿಲೋವಾಟ್ಸ್‌ವರೆಗಿನ ಮತ್ತು ಒಳಗೊಂಡಂತೆ ಭಾರಿ ವೋಲ್ಟೇಜ್ ತಂತಿ ಮಾರ್ಗ | 3.70 | 2.00 |

7.4.1 25 ಕಿಲೊವ್ಯಾಟ್ ಅಥವಾ ಅದಕ್ಕಿಂತ ಹೆಚ್ಚಿನ ಸಾಮರ್ಥ್ಯದ ವಿದ್ಯುತ್ ಸರಬರಾಜು ಬೇಕಾಗುವ ಕಟ್ಟಡಗಳಿಗೆ ಹಾಗೂ ಬಹು ಅಂತಸ್ತಿನ ಕಟ್ಟಡಗಳಿಗೆ, ಕಟ್ಟಡ ರೇಖೆಯಿಂದ ಮೂರು ಮೀಟರ್ ಅಂತರವನ್ನು ಬಿಟ್ಟು ಕೆ.ಇ.ಆರ್.ಸಿ. (ಇ.ಎಸ್. ಮತ್ತು ಡಿ) ಸಂಹಿತೆ ಅನುಗುಣವಾಗಿ ವಿತರಣಾ ಟ್ರಾನ್ಸ್‌ಫಾರ್ಮರ್‌ಗಳಿಗೆ ಮತ್ತು ಅದರ ಉಪಕರಣಗಳ ಅಳವಡಿಕೆಗಳಿಗೆ ನಿವೇಶನದ ಒಳಭಾಗದಲ್ಲಿ ಸ್ಥಳಾವಕಾಶ ಕಲ್ಪಿಸುವುದು.

**8.0.** **ಪ್ರವೇಶ ಮಾರ್ಗಗಳು**

**8.1.** ಸಾರ್ವಜನಿಕ ರಸ್ತೆಗಳು ಮತ್ತು ಓಣಿಗಳ ಮೂಲಕ ಪ್ರವೇಶ ಮಾರ್ಗಗಳನ್ನು ಹೊರತು ಪಡಿಸಿ ಯಾವುದೇ ನಿವೇಶನದ ಪ್ರತ್ಯೇಕ ಪ್ರವೇಶ ಮಾರ್ಗವು 5 ಮೀಟರ್ ಕನಿಷ್ಟ ಅಗಲ ಹೊಂದಿರ ತಕ್ಕದ್ದು. ಸಾರ್ವಜನಿಕ ರಸ್ತೆಗಳಿಂದ ಪ್ರವೇಶ ಮಾರ್ಗದ ಗರಿಷ್ಟ ಉದ್ದವು 30 ಮೀಟರ್ ಇರುವ ಸಂದರ್ಭದಲ್ಲಿ ಪ್ರವೇಶಮಾರ್ಗದ ಅಗಲವನ್ನು 3.50 ಮೀಟರ್ ವರೆವಿಗೆ ಕಡಿಮೆ ಗೊಳಿಸಲು ಪ್ರಾಧಿಕಾರವು ಅನುಮತಿಸಬಹುದು. ಉದ್ದವು 30 ಮೀಟರ್‌ವರೆವಿಗೆ ಮಾತ್ರ ಇರುವ ಪ್ರವೇಶ ಮಾರ್ಗಗಳನ್ನು ಹೊಂದಿರುವ ನಿವೇಶನಗಳ ಅಂತಸ್ತು ವಿಸ್ತೀರ್ಣ ಅನುಪಾತ ಮತ್ತು ಕಟ್ಟಡದ ಎತ್ತರಗಳನ್ನು ಸಾರ್ವಜನಿಕ ರಸ್ತೆಗಳ ಅಥವಾ ಓಣಿಗಳ ಅಗಲಗಳನ್ನು ಆಧರಿಸಿ ನಿಯಂತ್ರಿಸ ತಕ್ಕದ್ದು, ಪ್ರವೇಶ ಮಾರ್ಗದ ಉದ್ದವು 30 ಮೀಟರ್‌ಗಿಂತಲೂ ಹೆಚ್ಚಾಗಿದ್ದಲ್ಲಿ ನೆಲ ವಿಸ್ತೀರ್ಣ ಪ್ರಮಾಣವನ್ನು ಪ್ರವೇಶ ಮಾರ್ಗದ ಅಗಲವನ್ನು ಆಧಾರಿಸಿ ನಿಯಂತ್ರಿಸತಕ್ಕದ್ದು.

**8.2.** ಹಾಲಿ ಇರುವ ಕನ್ಸರ್‌ವೆನ್ಸಿ ಗಲ್ಲಿಗಳನ್ನು ಸ್ವತ್ತುಗಳಿಗೆ ಪ್ರವೇಶ ಮಾರ್ಗಗಳನ್ನಾಗಿ ಉಪಯೋಗಿಸಲು ಅನುಮತಿ ನೀಡತಕ್ಕದ್ದಲ್ಲ.

**8.3.** ಯಾವುದೇ ಕಟ್ಟಡವನ್ನು ಮತ್ತೊಂದು ಕಟ್ಟಡದ ಪ್ರವೇಶ ಮಾರ್ಗಕ್ಕೆ ಅಡಚಣೆಯಾಗುವಂತೆ ನಿರ್ಮಿಸತಕ್ಕದಲ್ಲ.

**8.4.** ಯಾವುದೇ ವ್ಯಕ್ತಿಯು ಪ್ರವೇಶ ಮಾರ್ಗದ ಅತಿಕ್ರಮಣವಾಗುವಂತೆ ಕಟ್ಟಡವನ್ನು ನಿರ್ಮಿಸತಕ್ಕದ್ದಲ್ಲ.

**8.5.** ಅನುಮೋದನೆಗೆ ಸಲ್ಲಿಸಲಾದ ನಕ್ಷೆಯಲ್ಲಿ ಪ್ರವೇಶ ಮಾರ್ಗದ ಅಗಲ, ಸಾರ್ವಜನಿಕರಸ್ತೆಯಿಂದ ಅದರ ಉದ್ದ, ಪ್ರವೇಶ ಮಾರ್ಗವು ಪ್ರಾರಂಭಗೊಳ್ಳುವಸಾರ್ವಜನಿಕ ರಸ್ತೆಯ ಅಗಲ ಮೊದಲಾದ ವಿವರಗಳನ್ನು ಸ್ಪಷ್ಟವಾಗಿ ತೋರಿಸ ತಕ್ಕದ್ದು.

**8.6.** ಅಂತಹ ಪ್ರತಿಯೊಂದು ಪ್ರವೇಶ ಮಾರ್ಗದಲ್ಲಿ ಪ್ರಾಧಿಕಾರಕ್ಕೆ ತೃಪ್ತಿಯಾಗುವ ರೀತಿಯಲ್ಲಿ ಚರಂಡಿ ಮತ್ತು ಬೆಳಕಿನ ವ್ಯವಸ್ಥೆಗಳನ್ನು ಒದಗಿಸತಕ್ಕದ್ದು ಮತ್ತು ಅಂತಹ ಪ್ರವೇಶ ಮಾರ್ಗದಲ್ಲಿ ನಿರ್ಮಿಸುವ ಮ್ಯಾನ್‌ಹೋಲ್ ಮುಚ್ಚಳಗಳು ಅಥವಾ ಇತರ ಒಳಚರಂಡಿ,

ನೀರು ಸರಬರಾಜು ಅಥವಾ ಇತರ ಯಾವುದೇ ಜೋಡಣೆಗಳನ್ನು ಸುರಕ್ಷಿತ ಸಂಚಾರಕ್ಕೆ ಅಡ್ಡಿಯಾಗದಂತೆ ಪೂರ್ಣಗೊಂಡ ಪ್ರವೇಶ ಮಾರ್ಗದ ಮೇಲ್ಮೈ ಮಟ್ಟಕ್ಕೆ ಸೀಮಿತಗೊಳಿಸತಕ್ಕದ್ದು.

**8.7.** ಪ್ರವೇಶಮಾರ್ಗದ ಹಾಲಿ ಅಗಲವನ್ನು ಯಾವುದೇ ಸಂದರ್ಭದಲ್ಲಿ ಕಡಿಮೆ ಮಾಡ ತಕ್ಕದ್ದಲ್ಲ.

**9.0. ಬಯಲು ಜಾಗಗಳು, ಆವೃತಪ್ರದೇಶ ಮತ್ತು ಅಂತಸ್ತು ವಿಸ್ತೀರ್ಣ ಅನುಪಾತ.**

**9.1. ಬಯಲು ಜಾಗಗಳು:–** ಮಾನವರ ವಾಸಕ್ಕಾಗಿ ಉದ್ದೇಶಿಸಲಾಗಿರುವ ಪ್ರತಿ ಕೊಠಡಿಯು ಒಂದು ಒಳಗಿನ ಅಥವಾ ಹೊರಗಿನ ಬಯಲು ಜಾಗ ಅಥವಾ ಅಂತಹ ಒಳಗಿನ ಅಥವಾ ಹೊರಗಿನ ಬಯಲುಗಾಗಿಯೇ ಚಾಚಿಕೊಂಡಿರುವ ತೆರೆದ ವರಾಂಡಕ್ಕೆ ಹೊಂದಿಕೊಂಡಿರ ತಕ್ಕದ್ದು.

**9.2.** ಹೊರಗಿನ ಬಯಲು ಜಾಗಗಳು ಅಥವಾ ನಡುಜಾಗಗಳು, ಆವೃತ ಪ್ರದೇಶ ಅಂತಸ್ತು ವಿಸ್ತೀರ್ಣ ಅನುಪಾತ, ಅಂತಸ್ತುಗಳ ಸಂಖ್ಯೆ ಮತ್ತು ಎತ್ತರಗಳು ವಿವಿಧ ಅಳತೆಗಳ ನಿವೇಶನಗಳು ಮತ್ತು ರಸ್ತೆಗಳ ಅಳತೆಗಳಿಗೆ ಅನುಸಾರವಾಗಿ, ಕಟ್ಟಡಗಳ ಎಲ್ಲಾ ಕಡೆಗಳಲ್ಲಿಯೂ ಅಗತ್ಯವಿರುವ ನಡುಜಾಗಗಳು, ಗರಿಷ್ಟ ಆವೃತ ಪ್ರದೇಶ, ಗರಿಷ್ಟ ಅಂತಸ್ತುಗಳ ಅನುಪಾತ, ಗರಿಷ್ಟ ಅಂತಸ್ತುಗಳ ಸಂಖ್ಯೆ, ಕಟ್ಟಡಗಳ ಗರಿಷ್ಟ ಎತ್ತರ ಇವುಗಳನ್ನು ಕೆಳಕಂಡ ಕೋಷ್ಠಕ 4, 5 ಮತ್ತು 6 ರಲ್ಲಿ ಕೊಡಲಾಗಿದೆ.

## ಕೋಷ್ಠಕ–4

**(ಉಪವಿಧಿ ಸಂಖ್ಯೆ:–9.2)**

**9.50 ಮೀಟರ್ ಎತ್ತರದ ವರೆಗಿನ ವಸತಿ, ವಾಣಿಜ್ಯ, ಸಾರ್ವಜನಿಕ ಮತ್ತು ಅರೆಸಾರ್ವಜನಿಕ, ಸಾರಿಗೆ ಮತ್ತು ಸಂಪರ್ಕ, ಹಾಗೂ ಸಾರ್ವಜನಿಕ ಉಪಯುಕ್ತತೆಯ ಕಟ್ಟಡಗಳಿಗೆ ಬಿಡಬೇಕಾದ ಹೊರಗಿನ ಬಯಲುಜಾಗಗಳು / ನಡುಜಾಗಗಳು–ಮೀಟರ್‌ಗಳಲ್ಲಿ**

| ನಿವೇಶನದ ಉದ್ದ ಮೀಟರ್‌ಗಳಲ್ಲಿ | ವಾಸ | | ವಾಣಿಜ್ಯ | | ಸಾ ಮತ್ತು ಅ.ಸಾ, ಸಾ ಮತ್ತು ಸಂ ಮತ್ತು ಸಾ.ಉ. | | ನಿವೇಶನದ ಅಗಲ ಮೀಟರ್‌ಗಳಲ್ಲಿ | ವಾಸ | | ವಾಣಿಜ್ಯ | | ಸಾ ಮತ್ತು ಅ.ಸಾ, ಸಾ ಮತ್ತು ಸಂ ಮತ್ತು ಸಾ.ಉ. | |
|---|---|---|---|---|---|---|---|---|---|---|---|---|---|
| | ಮುಂಭಾಗ | ಹಿಂಭಾಗ | ಮುಂಭಾಗ | ಹಿಂಭಾಗ | ಮುಂಭಾಗ | ಹಿಂಭಾಗ | | ಎಡ | ಬಲ | ಎಡ | ಬಲ | ಎಡ | ಬಲ |
| 6.00ಮೀ.ವರೆಗೆ | 1.00 | ------ | 1.00 | ------ | 1.50 | ---- | 6.00ಮೀ.ವರೆಗೆ | ---- | 1.00 | --- | --- | --- | 1.50 |
| 6.00ಮೀ.ಗೆ ಮೇಲ್ಪಟ್ಟು 9.00 ಮೀ. ನವರೆಗೆ | 1.00 | 1.00 | 1.50 | ------ | 1.50 | 1.50 | 6.00ಮೀ.ಗೆ ಮೇಲ್ಪಟ್ಟು 9.00 ಮೀ. ನವರೆಗೆ | 1.00 | 1.00 | --- | 1.50 | 1.50 | 1.50 |
| 9.00ಮೀ.ಗೆ ಮೇಲ್ಪಟ್ಟು 12.00 ಮೀ. ನವರೆಗೆ | 1.50 | 1.50 | 1.50 | 1.50 | 3.00 | 1.50 | 9.00ಮೀ.ಗೆ ಮೇಲ್ಪಟ್ಟು 12.00 ಮೀ. ನವರೆಗೆ | 1.50 | 1.50 | 1.50 | 1.50 | 1.75 | 1.50 |
| 12.00ಮೀ.ಗೆ ಮೇಲ್ಪಟ್ಟು 18.00 ಮೀ. ನವರೆಗೆ | 3.00 | 1.50 | 3.00 | 1.50 | 3.00 | 1.50 | 12.00ಮೀ.ಗೆ ಮೇಲ್ಪಟ್ಟು 18.00 ಮೀ. ನವರೆಗೆ | 1.50 | 3.00 | 1.50 | 3.00 | 2.00 | 3.00 |
| 18.00ಮೀ.ಗೆ ಮೇಲ್ಪಟ್ಟು 24.00 ಮೀ. ನವರೆಗೆ | 4.00 | 3.00 | 3.50 | 3.00 | 4.50 | 2.00 | 18.00ಮೀ.ಗೆ ಮೇಲ್ಪಟ್ಟು 24.00 ಮೀ. ನವರೆಗೆ | 2.50 | 3.50 | 2.50 | 4.00 | 3.00 | 3.00 |
| 24.00ಮೀ.ಗೆ ಮೇಲ್ಪಟ್ಟು | 5.00 | 3.50 | 4.50 | 3.00 | 6.00 | 3.00 | 24.00ಮೀ.ಗೆ ಮೇಲ್ಪಟ್ಟು | 3.00 | 4.00 | 3.00 | 4.50 | 3.50 | 4.50 |

**ಸಂಕ್ಷೇಪ:–** ಸಾ ಮತ್ತು ಸಂ – ಸಾರಿಗೆ ಮತ್ತು ಸಂಪರ್ಕ.
ಸಾ.ಉ – ಸಾರ್ವಜನಿಕ ಉಪಯುಕ್ತತೆ.
ಸಾ ಮತ್ತು ಅ.ಸಾ– ಸಾರ್ವಜನಿಕ ಮತ್ತು ಅರೆ ಸಾರ್ವಜನಿಕ

## ಕೋಷ್ಠಕ–5

**(ಉಪವಿಧಿ ಸಂಖ್ಯೆ:–9.2)**

**9.50 ಮೀಟರ್‌ಗಿಂತಲೂ ಎತ್ತರವಿರುವ ವಸತಿ, ವಾಣಿಜ್ಯ, ಸಾರ್ವಜನಿಕ ಮತ್ತು ಅರೆಸಾರ್ವಜನಿಕ, ಸಾರಿಗೆ ಮತ್ತು ಸಂಪರ್ಕ, ಹಾಗೂ ಸಾರ್ವಜನಿಕ ಉಪಯುಕ್ತತೆಯ ಕಟ್ಟಡಗಳಿಗೆ ಬಿಡಬೇಕಾದ ಹೊರಗಿನ ಬಯಲುಜಾಗಗಳು / ನಡುಜಾಗಗಳು–ಮೀಟರ್‌ಗಳಲ್ಲಿ**

| ಕ್ರ. ಸಂ | ಕಟ್ಟಡದ ಎತ್ತರ–ಮೀಟರ್‌ಗಳಲ್ಲಿ | ಎಲ್ಲಾ ಕಡೆಗಳಲ್ಲಿಯೂ ಬಿಡಬೇಕಾದ (ಮುಂಭಾಗ, ಹಿಂಭಾಗ ಮತ್ತು ಪಕ್ಕಗಳು) ಹೊರಗಿನ ಬಯಲು ಜಾಗಗಳು / ನಡುಜಾಗಗಳು–ಮೀಟರ್‌ಗಳಲ್ಲಿ |
|---|---|---|
| 1 | 2 | 3 |
| 1 | 9.50ಮೀಟರ್‌ಗೆ ಮೇಲ್ಪಟ್ಟು 12.00ಮೀಟರ್ ರವರೆಗೆ | 4.50 ಮೀಟರ್ |

| 1 | 2 | 3 |
|---|---|---|
| 2 | 12.00ಮೀಟರ್‌ಗೆ ಮೇಲ್ಪಟ್ಟು 15.00ಮೀಟರ್ ರವರೆಗೆ | 5.00 ಮೀಟರ್ |
| 3 | 15.00ಮೀಟರ್‌ಗೆ ಮೇಲ್ಪಟ್ಟು 18.00ಮೀಟರ್ ರವರೆಗೆ | 6.00 ಮೀಟರ್ |
| 4 | 18.00ಮೀಟರ್‌ಗೆ ಮೇಲ್ಪಟ್ಟು 21.00ಮೀಟರ್ ರವರೆಗೆ | 7.00 ಮೀಟರ್ |
| 5 | 21.00ಮೀಟರ್‌ಗೆ ಮೇಲ್ಪಟ್ಟು 24.00ಮೀಟರ್ ರವರೆಗೆ | 8.00 ಮೀಟರ್ |
| 6 | 24.00ಮೀಟರ್‌ಗೆ ಮೇಲ್ಪಟ್ಟು 27.00ಮೀಟರ್ ರವರೆಗೆ | 9.00 ಮೀಟರ್ |
| 7 | 27.00ಮೀಟರ್‌ಗೆ ಮೇಲ್ಪಟ್ಟು 30.00ಮೀಟರ್ ರವರೆಗೆ | 10.00 ಮೀಟರ್ |
| 8 | 30.00ಮೀಟರ್‌ಗೆ ಮೇಲ್ಪಟ್ಟು 35.00ಮೀಟರ್ ರವರೆಗೆ | 11.00 ಮೀಟರ್ |
| 9 | 35.00ಮೀಟರ್‌ಗೆ ಮೇಲ್ಪಟ್ಟು 40.00ಮೀಟರ್ ರವರೆಗೆ | 12.00 ಮೀಟರ್ |
| 10 | 40.00ಮೀಟರ್‌ಗೆ ಮೇಲ್ಪಟ್ಟು 45.00ಮೀಟರ್ ರವರೆಗೆ | 13.00 ಮೀಟರ್ |
| 11 | 45.00ಮೀಟರ್‌ಗೆ ಮೇಲ್ಪಟ್ಟು 50.00ಮೀಟರ್ ರವರೆಗೆ | 14.00 ಮೀಟರ್ |
| 12 | 50.00ಮೀಟರ್‌ಗೆ ಮೇಲ್ಪಟ್ಟು | 16.00 ಮೀಟರ್ |

**ಕೋಷ್ಟಕ–6**

**(ಉಪವಿಧಿ ಸಂಖ್ಯೆ:–9.2 ಮತ್ತು 9.10)**

**ವಸತಿ, ವಾಣಿಜ್ಯ, ಸಾರ್ವಜನಿಕ ಮತ್ತು ಅರೆಸಾರ್ವಜನಿಕ, ಸಾರಿಗೆ ಮತ್ತು ಸಂಪರ್ಕ, ಹಾಗೂ ಸಾರ್ವಜನಿಕ ಉಪಯುಕ್ತತೆಯ ಕಟ್ಟಡಗಳಿಗಾಗಿ ಆವೃತ ಪ್ರದೇಶ ಮತ್ತು ಅಂತಸ್ತು ವಿಸ್ತೀರ್ಣ ಅನುಪಾತ.**

| ನಿವೇಶನದ ವಿಸ್ತೀರ್ಣ ಚದರ ಮೀಟರ್‌ಗಳಲ್ಲಿ | ವಸತಿ | | ವಾಣಿಜ್ಯ | | ಸಾ ಮತ್ತು ಅ.ಸಾ, ಸಾ ಮತ್ತು ಸಂ ಮತ್ತು ಸಾ.ಉ. | | ರಸ್ತೆಯ ಅಗಲ ಮೀಟರ್‌ಗಳಲ್ಲಿ |
|---|---|---|---|---|---|---|---|
| | ನಿವೇಶನದ ಆವೃತ ಪ್ರದೇಶಗರಿಷ್ಠ | ಅಂತಸ್ತು ವಿಸ್ತೀರ್ಣ ಅನುಪಾತ ಗರಿಷ್ಟ | ನಿವೇಶನದ ಆವೃತ ಪ್ರದೇಶಗರಿಷ್ಠ | ಅಂತಸ್ತು ವಿಸ್ತೀರ್ಣ ಅನುಪಾತ ಗರಿಷ್ಟ | ನಿವೇಶನದ ಆವೃತ ಪ್ರದೇಶ ಗರಿಷ್ಠ | ಅಂತಸ್ತು ವಿಸ್ತೀರ್ಣ ಅನುಪಾತ ಗರಿಷ್ಟ | |
| ಎ– ಅಧಿಕ ಜನಸಾಂದ್ರತೆಯ ಪ್ರದೇಶ | | | | | | | |
| 240 ಚ.ಮೀವರೆಗೆ | ಶೇ.65 | 0.75 | ಶೇ.65 | 1.00 | ಶೇ.60 | 1.00 | 6.ಮೀ.ವರೆಗೆ |
| 240 ಚ.ಮೀಗೆ ಮೇಲ್ಪಟ್ಟು 500 ಚ.ಮೀ.ನವರೆಗೆ | ಶೇ.60 | 0.75 | ಶೇ.60 | 1.00 | ಶೇ.55 | 1.00 | 6.ಮೀ.ಗೆ ಮೇಲ್ಪಟ್ಟು 9ಮೀ. ನವರೆಗೆ |
| 500.ಚ.ಮೀಗೆ ಮೇಲ್ಪಟ್ಟು 750 ಚಮೀ. ನವರೆಗೆ | ಶೇ.60 | 1.00 | ಶೇ.60 | 1.25 | ಶೇ.50 | 1.00 | 9ಮೀ.ಗೆ ಮೇಲ್ಪಟ್ಟು 12ಮೀ. ನವರೆಗೆ |
| 750 ಚ.ಮೀಗೆ ಮೇಲ್ಪಟ್ಟು 1000 ಚ.ಮೀ. ನವರೆಗೆ | ಶೇ.60 | 1.00 | ಶೇ.60 | 1.25 | ಶೇ.50 | 1.25 | 12 ಮೀ.ಗೆ ಮೇಲ್ಪಟ್ಟು 15 ಮೀ. ನವರೆಗೆ |
| 1000. ಚ.ಮೀಗೆ ಮೇಲ್ಪಟ್ಟು | ಶೇ.60 | 1.25 | ಶೇ.55 | 1.50 | ಶೇ.45 | 1.25 | 15 ಮೀ.ಗೆ ಮೇಲ್ಪಟ್ಟು |
| ಬಿ.– ಮಧ್ಯಮ ಜನಸಾಂದ್ರತೆಯ ಪ್ರದೇಶ | | | | | | | |
| 240. ಚ.ಮೀವರೆಗೆ | ಶೇ.65 | 1.00 | ಶೇ.65 | 1.25 | ಶೇ.60 | 1.00 | 9 ಮೀ.ವರೆಗೆ |
| 240ಚ.ಮೀಗೆ ಮೇಲ್ಪಟ್ಟು 500 ಚ.ಮೀ. ನವರೆಗೆ | ಶೇ.60 | 1.25 | ಶೇ.60 | 1.50 | ಶೇ.55 | 1.25 | 9 ಮೀ.ಗೆ ಮೇಲ್ಪಟ್ಟು 12. ಮೀ. ನವರೆಗೆ |
| 500.ಚ.ಮೀಗೆ ಮೇಲ್ಪಟ್ಟು 750 ಚ.ಮೀ.ನವರೆಗೆ | ಶೇ.60 | 1.25 | ಶೇ.60 | 1.50 | ಶೇ.50 | 1.25 | 12.ಮೀ.ಗೆ ಮೇಲ್ಪಟ್ಟು 15. ಮೀ. ನವರೆಗೆ |
| 750 ಚ.ಮೀಗೆ ಮೇಲ್ಪಟ್ಟು 1000ಚ.ಮೀ.ನವರೆಗೆ | ಶೇ.60 | 1.50 | ಶೇ.60 | 1.75 | ಶೇ.50 | 1.50 | 15 ಮೀ.ಗೆ ಮೇಲ್ಪಟ್ಟು 18 ಮೀ. ನವರೆಗೆ |
| 1000 ಚ.ಮೀಗೆ ಮೇಲ್ಪಟ್ಟು | ಶೇ.60 | 1.75 | ಶೇ.55 | 1.75 | ಶೇ.45 | 1.50 | 18 ಮೀ.ಗೆ ಮೇಲ್ಪಟ್ಟು |
| ಸಿ.– ವಿರಳ ಜನಸಾಂದ್ರತೆಯ ಪ್ರದೇಶ | | | | | | | |
| 240 ಚ.ಮೀವರೆಗೆ | ಶೇ.65 | 1.00 | ಶೇ.65 | 1.25 | ಶೇ.60 | 1.25 | 9ಮೀ.ವರೆಗೆ |
| 240 ಚ.ಮೀಗೆ ಮೇಲ್ಪಟ್ಟು 500 ಚ.ಮೀ. ನವರೆಗೆ | ಶೇ.60 | 1.25 | ಶೇ.60 | 1.50 | ಶೇ.55 | 1.50 | 9ಮೀ.ಗೆ ಮೇಲ್ಪಟ್ಟು 12. ಮೀ. ನವರೆಗೆ |
| 500 ಚ.ಮೀಗೆ ಮೇಲ್ಪಟ್ಟು 750 ಚ.ಮೀ. ನವರೆಗೆ | ಶೇ.60 | 1.50 | ಶೇ.60 | 1.75 | ಶೇ.50 | 1.50 | 12ಮೀ.ಗೆ ಮೇಲ್ಪಟ್ಟು 15 ಮೀ. ನವರೆಗೆ |
| 750 ಚ.ಮೀಗೆ ಮೇಲ್ಪಟ್ಟು 1000ಚ.ಮೀ. ನವರೆಗೆ | ಶೇ.60 | 1.50 | ಶೇ.60 | 1.75 | ಶೇ.50 | 1.80 | 15ಮೀ.ಗೆ ಮೇಲ್ಪಟ್ಟು 18.ಮೀ. ನವರೆಗೆ |
| 1000 ಚ.ಮೀಗೆ ಮೇಲ್ಪಟ್ಟು | ಶೇ.60 | 2.00 | ಶೇ.55 | 2.00 | ಶೇ.45 | 1.80 | 18ಮೀ.ಗೆ ಮೇಲ್ಪಟ್ಟು |

**ಸೂಚನೆ:–**1) ಯಾವುದೇ ಬ್ರಿಟಿಷ್ ಪದ್ಧತಿಯ ಅಳತೆಗಳನ್ನು ನಿವೇಶನಗಳ ಅಳತೆಗಳಿಗೆ ಉಪಯೋಗಿಸಿದ್ದಲ್ಲಿ ಅಂತಹ ಅಳತೆಗಳನ್ನು ಮೆಟ್ರಿಕ್ ಪದ್ಧತಿಯಲ್ಲಿ ಕೆಳಕಂಡಂತೆ ವ್ಯಾಖ್ಯಾನಿಸಬಹುದು ಮತ್ತು ಅದರಂತೆ ನಡುಜಾಗಗಳನ್ನು ಅನ್ವಯಿಸಬಹುದು.

20 ಅಡಿ= 6.00 ಮೀಟರ್

30 ಅಡಿ= 9.00 ಮೀಟರ್

40 ಅಡಿ= 12.00 ಮೀಟರ್

50 ಅಡಿ= 15.00 ಮೀಟರ್

60 ಅಡಿ= 18.00 ಮೀಟರ್

80 ಅಡಿ= 24.00 ಮೀಟರ್

2) ಅಳವಡಿಸಬೇಕಾದ ಬಯಲು ಜಾಗಗಳು ಅನುಮತಿಸಬಹುದಾದ ಅಂತಸ್ತು ವಿಸ್ತೀರ್ಣ ಅನುಪಾತವನ್ನು ಉಪಯೋಗಿಸಿಕೊಳ್ಳಲು ಅಗತ್ಯವಾದ ಎತ್ತರಕ್ಕೆ ಅನುಗುಣವಾಗಿರತಕ್ಕದ್ದು.

3). (ಎ) ಮುಂಭಾಗದ ಮತ್ತು ಹಿಂಭಾಗದ ನಡುಜಾಗಗಳು ನಿವೇಶನದ ಉದ್ದಕ್ಕೆ ಅನುಗುಣವಾಗಿರತಕ್ಕದ್ದು.

(ಬಿ) ಎಡಭಾಗ ಮತ್ತು ಬಲಭಾಗದ ನಡುಜಾಗಗಳು ನಿವೇಶನದ ಅಗಲಕ್ಕೆ ಅನುಗುಣವಾಗಿರತಕ್ಕದ್ದು.

(ಸಿ) ಕಟ್ಟಡದ ಎತ್ತರವು 9.50ಮೀಟರಿಗಿಂತಲೂ ಹೆಚ್ಚಾಗಿದ್ದಲ್ಲಿ ಕೋಷ್ಟಕ–5 ಮತ್ತು 6 ರಲ್ಲಿ ನಮೂದಿಸಿರುವ ನಡುಜಾಗಗಳ ಪೈಕಿ ಹೆಚ್ಚಿನದನ್ನು ಅಳವಡಿಸಿಕೊಳ್ಳತಕ್ಕದ್ದು.

4) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಕೋಷ್ಟಕ 33ರ ವಲಯ ನಿಯಮಗಳಲ್ಲಿ ಕೆಲವು ರಸ್ತೆಗಳಿಗೆ ಕಟ್ಟಡಗಳ ಸಾಲು ರೇಖೆಗಳನ್ನು ನಿಗದಿಪಡಿಸಿರುತ್ತದೆ. ಸದರಿ ಕೋಷ್ಟಕವನ್ನು ಈ ಉಪವಿಧಿಗಳ ಅನುಸೂಚಿ X. ರಲ್ಲಿ ಕೂಡಿಸಲಾಗಿದೆ. ಅಂತಹ ಸಂದರ್ಭಗಳಲ್ಲಿ ಮುಂದಿನ ನಡುಜಾಗ ಅಥವಾ ಕಟ್ಟಡ ಸಾಲುರೇಖೆ ಇವುಗಳಲ್ಲಿ ಹೆಚ್ಚಿನದನ್ನು ಅಳವಡಿಸತಕ್ಕದ್ದು.

5) ಮೂಲೆ ನಿವೇಶನಗಳಿಗೆ ಸಂಬಂಧಿಸಿದಂತೆ ರಸ್ತೆಗೆ ಅಭಿಮುಖವಾಗಿರುವ ಎರಡು ಪಾರ್ಶ್ವಗಳನ್ನು ಮುಂಭಾಗವೆಂದು ಪರಿಗಣಿಸತಕ್ಕದ್ದು ಮತ್ತು ಈ ರಸ್ತೆಗಳಿಗೆ ನಿಗದಿಗೊಳಿಸಿರುವ ಕಟ್ಟಡ ರೇಖೆಗಳನ್ನು ನಿರ್ವಹಿಸಲು ಮತ್ತು ಉತ್ತಮವಾಗಿ ಕಾಣುವಂತೆ ಮಾಡಲು ಅದಕ್ಕೆ ಅನುಸಾರವಾಗಿ ನಿಬಂಧನೆಗಳನ್ನು ಅನ್ವಯಿಸತಕ್ಕದ್ದು.

6) ಎರಡಕ್ಕಿಂತ ಹೆಚ್ಚಿನ ರಸ್ತೆಗಳಿಗೆ ಅಭಿಮುಖವಾಗಿರುವ ಕಟ್ಟಡಗಳ ವಿಷಯದಲ್ಲಿ ಎರಡು ಹೆಚ್ಚಿನ ಅಗಲದ ರಸ್ತೆಗಳನ್ನು ಪರಿಗಣಿಸಿ ನಿವೇಶವನ್ನು ಮೂಲೆ ನಿವೇಶನವೆಂದು ಪರಿಗಣಿಸತಕ್ಕದ್ದು.

7) ಮುಂಭಾಗ ಮತ್ತು ಹಿಂಭಾಗದಲ್ಲಿ ರಸ್ತೆಗಳಿಗೆ ಅಭಿಮುಖವಾಗಿರುವ ನಿವೇಶನಗಳ ವಿಷಯದಲ್ಲಿ ರಸ್ತೆಗಳಿಗೆ ಅಭಿಮುಖವಾಗಿರುವ ಎರಡು ಪಾರ್ಶ್ವಗಳನ್ನು ಮುಂಭಾಗವೆಂದು ಪರಿಗಣಿಸತಕ್ಕದ್ದು ಮತ್ತು ರಸ್ತೆಗಳಿಗೆ ಅಭಿಮುಖವಾಗಿರದ ಉಳಿದ ಎರಡು ಪಾರ್ಶ್ವಗಳನ್ನು ಬಲಭಾಗವೆಂದು ಪರಿಗಣಿಸತಕ್ಕದ್ದು ಮತ್ತು ಅದರಂತೆ ನಡುಜಾಗಗಳನ್ನು ನಿರ್ಣಯಿಸತಕ್ಕದ್ದು.

8) ಕಟ್ಟಡದ ಮೇಲುಪಾಯವು ಸ್ವತ್ತಿನ ಗಡಿಗೆ ಸಮಾನಾಂತರವಾಗಿ ಇಲ್ಲದೇ ಇದ್ದಲ್ಲಿ ಯಾವುದೇ ಪಾರ್ಶ್ವದ ಯಾವುದೇ ಬಿಂದುವಿನಲ್ಲಿ ನಡುಜಾಗಗಳು ನಿಗದಿತ ನಡುಜಾಗಗಳಿಗಿಂತಲೂ ಕಡಿಮೆ ಇರತಕ್ಕದಲ್ಲ.

9) ಅಭಿಮುಖ ಪಾರ್ಶ್ವಗಳು ಒಂದೇ ಅಳತೆಹೊಂದಿರದ ಅಥವಾ ಸಮಾನಾಂತರವಾಗಿರದ ನಿವೇಶನಗಳಲ್ಲಿ ಉದ್ದ ಅಥವಾ ಅಗಲಗಳಿಗೆ ಅನುಸಾರವಾಗಿ ಉದ್ದ ಅಥವಾ ಅಗಲಗಳು ವಿಭಿನ್ನವಾಗುವ ಬಿಂದುವಿನಲ್ಲಿ ನಡುಜಾಗಗಳನ್ನು ಲೆಕ್ಕ ಹಾಕತಕ್ಕದ್ದು. ಅಂತಹ ಪ್ರಕರಣಗಳಲ್ಲಿ ಸರಾಸರಿ ನಡುಜಾಗಗಳನ್ನು ಪರಿಗಣಿಸತಕ್ಕದಲ್ಲ.

10) ಅಸ್ತಿತ್ವದಲ್ಲಿರುವ ತೆರೆದ ಬಾವಿಗಳಂತಹ ನಿರ್ಮಾಣಗಳು ಮತ್ತು ಜಮೀನಿನ ಸ್ವರೂಪವನ್ನು ಪರಿಗಣಿಸಿ ವಿಶೇಷ ಪ್ರಕರಣಗಳಲ್ಲಿ ಪ್ರಾಧಿಕಾರವು ಎಡ ಮತ್ತು ಬಲಭಾಗದ ನಡುಜಾಗಗಳನ್ನು ಪರಸ್ಪರ ಬದಲಾಯಿಸಬಹುದು. ಆದಾಗ್ಯೂ ಇದನ್ನು ಪ್ರಾಧಿಕಾರವು ಒಂದು ವಿನಾಯಿತಿಯೆಂದು ಪರಿಗಣಿಸತಕ್ಕದ್ದು.

11) ನಡುಜಾಗಗಳನ್ನು ಮಾಲೀಕರಿಗೆ ಸೇರಿದ ನಿವೇಶನಗಳಲ್ಲಿ ಅಳವಡಿಸತಕ್ಕದ್ದು ಸಾರ್ವಜನಿಕ ಖಾಲಿ ಪ್ರದೇಶ ಅಥವಾ ಕನ್ಸರ್ವೆನ್ಸಿಗಲ್ಲಿಗಳನ್ನು ನಡುಜಾಗಗಳೆಂದು ಪರಿಗಣಿಸತಕ್ಕುದಲ್ಲ.

12) ಏಕ ನಿವೇಶನದಲ್ಲಿ ಎರಡು ಅಥವಾ ಹೆಚ್ಚಿನ ಕಟ್ಟಡಗಳನ್ನು ಕಟ್ಟಲು ಪ್ರಸ್ತಾಪಿಸಿರುವ ಸಂದರ್ಭಗಳಲ್ಲಿ ಅವುಗಳನ್ನು ಒಂದೇ ಸಾಮಾನ್ಯ ಕಟ್ಟಡವೆಂದು ಪರಿಗಣಿಸಿ ನಡುಜಾಗಗಳನ್ನು ಅನ್ವಯಿಸತಕ್ಕದ್ದು. ಇಂತಹ ಸನ್ನಿವೇಶಗಳಲ್ಲಿ ಎರಡು ಕಟ್ಟಡಗಳ ನಡುವಿನ ಅಂತರವು ಅವುಗಳಲ್ಲಿ ಹೆಚ್ಚಿನ ಎತ್ತರದ ಕಟ್ಟಡದ ಕನಿಷ್ಟ ಅರ್ಧದಷ್ಟಿರ ತಕದ್ದು.

13) 750ಚ.ಮೀ ಗಿಂತಲೂ ಹೆಚ್ಚಿನ ಕ್ಷೇತ್ರದ ನಿವೇಶನಗಳಿಗೆ ಘಂಟೆಯ ಬಾಯಿಯ ಆಕಾರದ ಪ್ರವೇಶ ದ್ವಾರವನ್ನು ಒದಗಿಸತಕ್ಕದ್ದು.

14) ಮೇಲೆ ಸೂಚಿಸಿರುವ ಮುಂಭಾಗದ ನಡುಜಾಗ ಕನಿಷ್ಟವಾಗಿರುತ್ತದೆ. ಕಟ್ಟಡದ ಸಾಲುಗಳನ್ನು ಸೂಕ್ತ ಪ್ರಾಧಿಕಾರಿವು ನಿಗಧಿಪಡಿಸಿದ್ದಲ್ಲಿ, ಅದರಂತೆ ಕಟ್ಟಡವನ್ನು ಸ್ಥಳಾಂತರಿಸತಕ್ಕದ್ದು.

**9.3. ಎತ್ತರಿಸಿದ ಕಟ್ಟಡಗಳು:–**

**9.3.1.** ಎತ್ತರಿಸಿದ ಕಟ್ಟಡಗಳ ವಿಷಯದಲ್ಲಿ ಕಟ್ಟಡದ ಸುತ್ತಲಿನ ಕನಿಷ್ಟ ನಡುಜಾಗವು ಕೋಷ್ಟಕ–5ರ ಪ್ರಕಾರ ಇರತಕ್ಕದ್ದು.

**9.3.2.** ಎತ್ತರಿಸಿದ ಕಟ್ಟಡಗಳ ನಿವೇಶನದ ಕನಿಷ್ಠ ಉದ್ದ ಅಥವಾ ಅಗಲವು 21ಮೀಟರ್ ಇರತಕ್ಕದ್ದು.

**9.3.3.** ಎತ್ತರಿಸಿದ ಕಟ್ಟಡಕ್ಕೆ ಅಭಿಮುಖವಾಗಿರುವ ರಸ್ತೆಯ ಕನಿಷ್ಠ ಅಗಲವು 12ಮೀಟರ್ ಇರತಕ್ಕದ್ದು.

**9.4. ಗ್ಯಾರೇಜ್‌ಗಳು:–**

**9.4.1.** ಕೆಳಕಂಡ ಅಗತ್ಯಗಳನ್ನು ಪೂರೈಸಿದ ಪಕ್ಷದಲ್ಲಿ 9.50 ಮೀಟರ್ ವರೆಗಿನ ಎತ್ತರದ ಕಟ್ಟಡಗಳಿಗೆ ಬಲಭಾಗದ ಮತ್ತು ಹಿಂಭಾಗದ ನಡುಜಾಗಗಳನ್ನು ಅಳವಡಿಸದೇ ನಿವೇಶನದ ಬಲ ಪಾರ್ಶ್ವದ ಮೂಲೆಯಲ್ಲಿ ಒಂದು ಗ್ಯಾರೇಜ್‌ಗೆ ಅನುಮತಿ ನೀಡಬಹುದು. ಅವು ಯಾವುವೆಂದರೆ,

ಎ) ನೆಲ ಮಟ್ಟದಿಂದ ಗ್ಯಾರೇಜಿನ ಎತ್ತರವು ಮೂರು ಮೀಟರಿಗಿಂತಲೂ ಹೆಚ್ಚಿರ ಕೂಡದು.

ಬಿ) ಗ್ಯಾರೇಜಿನ ಮೇಲೆ ಒಂದಕ್ಕಿಂತ ಹೆಚ್ಚು ಮೇಲು ಅಂತಸ್ತನ್ನು ಪ್ರಸ್ತಾಪಿಸಬಾರದು.

ಸಿ) ಗ್ಯಾರೇಜಿನ ಮತ್ತು ಅದರ ಮೇಲೆ ಮೇಲು ಅಂತಸ್ತು ಇದ್ದಲ್ಲಿ ಅವುಗಳ ಒಟ್ಟು ಎತ್ತರವು ನೆಲಮಟ್ಟದಿಂದ 6.50 ಮೀಟರ್‌ಗಿಂತಲೂ ಹೆಚ್ಚಿರ ಕೂಡದು.

ಡಿ) ಗ್ಯಾರೇಜ್‌ನ ಮೇಲು ಅಂತಸ್ತಿನ ಮೇಲೆ ಯಾವುದೇ ನಿರ್ಮಾಣವನ್ನು ಉದ್ದೇಶಿಸಬಾರದು.

ಇ) ಗ್ಯಾರೇಜ್ ಮತ್ತು ಅದರ ಮೇಲು ಅಂತಸ್ತಿನಲ್ಲಿ ನೆರೆಹೊರೆ ಕಟ್ಟಡಗಳ ಕಡೆ ಯಾವುದೇ ಬೆಳಕಿನ ಕಿಂಡಿಗಳನ್ನು ನಿರ್ಮಿಸ ಕೂಡದು.

ಎಫ್) ಮೇಲು ಅಂತಸ್ತಿನ ನೆಲವನ್ನು ಕೆಳ ಅಂತಸ್ತಿನ ನೆಲದಿಂದ ಮಾತ್ರ ಪ್ರವೇಶಿಸುವಂತಿರ ಬೇಕು.

ಜಿ) ಗ್ಯಾರೇಜಿನ ನೆಲ ಅಂತಸ್ತಿನಲ್ಲಿ ಕಟ್ಟಡದ ಹಿಂಭಾಗದ ನಡುಜಾಗದ ಕಡೆಗೆ ಒಂದಕ್ಕಿಂತಲೂ ಹೆಚ್ಚಿನ ಪಕ್ಕದ ಬಾಗಿಲನ್ನು ನಿರ್ಮಿಸಬಾರದು.

ಹೆಚ್) ಗ್ಯಾರೇಜಿನ ಹಿಂಭಾಗದಲ್ಲಿ ಒಂದು ಲಂಬರ್ ಕೊಠಡಿ (ಹಳೆಯ ಸಾಮಾಗ್ರಿಗಳನ್ನು ಇಡಲು ಉಪಯೋಗಿಸುವ ಒಂದು ಕೊಠಡಿ) ಮತ್ತು ಒಂದು ಮಹಡಿ ಮೆಟ್ಟಿಲನ್ನು ಹೊರತು ಪಡಿಸಿ ಇತರ ನಿರ್ಮಾಣಗಳನ್ನು ಮಾಡ ಕೂಡದು.

ಐ) ಲಂಬರ್ ಕೊಠಡಿಯ ಉದ್ದವೂ 1.25 ಮೀಟರಿಗಿಂತಲೂ ಹೆಚ್ಚಿರ ಕೂಡದು

ಜೆ) ಲಂಬರ್ ಕೊಠಡಿ ಮತ್ತು ಮೆಟ್ಟಿಲನ್ನು ಒಳಗೊಂಡಂತೆ ಗ್ಯಾರೇಜ್‌ನ ಉದ್ದವು ನಿವೇಶನದ ಉದ್ದದ ಮೂರನೇ ಒಂದು ಭಾಗ ಅಥವಾ 6.00 ಮೀಟರ್, ಇವುಗಳಲ್ಲಿ ಯಾವುದು ಕಡಿಮೆಯೋ ಅದಕ್ಕಿಂತಲೂ ಹೆಚ್ಚಿರ ಕೂಡದು.

ಕೆ) ಗ್ಯಾರೇಜಿನ ಅಗಲವು 4.00 ಮೀಟರಿಗಿಂತಲೂ ಹೆಚ್ಚಿರ ಕೂಡದು.

ಎಲ್) ಗ್ಯಾರೇಜಿನ ಹೊರ ಮೇಲ್ಮೈಯಿಂದ ನಿವೇಶನದ ಗಡಿಯ ವರೆಗಿನ ದೂರವು 4.50 ಮೀಟರಿಗಿಂತಲೂ ಕಡಿಮೆ ಇರಕೂಡದು.

ಎಂ) ಮೂಲೆ ನಿವೇಶನಗಳಿಗೆ ಸಂಬಂಧಿಸಿದಂತೆ ರಸ್ತೆಗಳು ಸಂದಿಸುವ ಸ್ಥಳಕ್ಕೆ ಎದುರಾಗಿರುವ ಮೂಲೆಯಲ್ಲಿ ಗ್ಯಾರೇಜ್‌ನ್ನು ನಿರ್ಮಿಸ ತಕ್ಕದ್ದು.

**9.4.2.** ಮೂರು ಮೀಟರಿಗಿಂತಲೂ ಹೆಚ್ಚಿನ ಅಗಲ ಹೊಂದಿರದ ಒಂದು ಗ್ಯಾರೇಜ್‌ಗೆ ಮುಖ್ಯ ಕಟ್ಟಡದ ಒಂದು ಭಾಗವಾಗಿ ಅಂತಹ ಕಟ್ಟಡಕ್ಕೆ ಅನ್ವಯಿಸುವ ಕನಿಷ್ಟ ನಡುಜಾಗಗಳನ್ನು ಅಳವಡಿಸಿ ಅನುಮತಿ ನೀಡಬಹುದು, ಪರಂತು ಅಂತಹ ಗ್ಯಾರೇಜ್‌ನ್ನು ಮೂಲೆ ನಿವೇಶನಗಳ ವಿಷಯದಲ್ಲಿ ರಸ್ತೆಗಳು ಸಂಧಿಸುವ ಸ್ಥಳದಲ್ಲಿ ಸ್ಥಾಪಿಸ ಕೂಡದು. ಗ್ಯಾರೇಜಿನ ಉದ್ದವು ನಿವೇಶನದ ಸಂಬಂದಿಸಿದ ಪಾರ್ಶ್ವದ ಉದ್ದದ ಮೂರನೇ ಒಂದು ಭಾಗ ಅಥವಾ 6.00 ಮೀಟರ್ ಇವುಗಳಲ್ಲಿ ಯಾವುದು ಕಡಿಮೆಯೋ ಅದಕ್ಕಿಂತಲೂ ಹೆಚ್ಚಿರ ಕೂಡದು.

**9.5. ನಡುಜಾಗದಲ್ಲಿ ರ‍್ಯಾಂಪಿನ ಅಳವಡಿಕೆ:–**

ನಿವೇಶನದ ಮೇಲ್ಮೈ ಮಟ್ಟದಿಂದ ತಳ ಅಂತಸ್ತಿನ ನೆಲದ ಮಟ್ಟದ ವರೆಗಿನ ರ‍್ಯಾಂಪಿನ ಅಗಲ ಕನಿಷ್ಠ 3.50 ಮೀಟರ್ ಇರತಕ್ಕದ್ದು ಮತ್ತು 1 ರಲ್ಲಿ 10 ಇಳಿಜಾರುಗಿಂತಲೂ ಹೆಚ್ಚು ಇಳಿಜಾರು ಹೊಂದಿರತಕ್ಕದಲ್ಲ. ಅ ಪಕ್ಕದ ಆಸ್ತಿಗಳ ಅಂಚಿನಿಂದ ಕನಿಷ್ಠ ಎರಡು ಮೀಟರ್‌ಗಳ ಅಂತರವನ್ನು ಖಾಲಿ ಬಿಟ್ಟಿರತಕ್ಕದ್ದು. ರ‍್ಯಾಂಪಿನ ಇಳಿಜಾರುಗಳು ನಿವೇಶನದ ಮುಂದಿನ ಎಲ್ಲೆಯಿಂದ ಕನಿಷ್ಟ ಒಂದು ಮೀಟರ್ ದೂರವನ್ನು ಬಿಟ್ಟು ಪ್ರಾರಂಭವಾಗತಕ್ಕದ್ದು. ಎತ್ತರಿಸಿದ ಕಟ್ಟಡಗಳ ವಿಷಯದಲ್ಲಿ ಅಗ್ನಿಶಾಮಕ ಯಂತ್ರಗಳ ಸುಗಮ ಸಂಚಾರಕ್ಕೆ ಅಡ್ಡಿಯಾಗದಂತೆ ನಡುಜಾಗದಲ್ಲಿ ರ‍್ಯಾಂಪನ್ನು ಅಳವಡಿಸಬಹುದು.

**9.6. ಭೂ ಉಪಯೋಗದ ಅನ್ವಯ:–**

**9.6.1.** ಅಭಿವೃದ್ಧಿ ಯೋಜನೆಯ ವಿಭಾಗವಾರು ನಕ್ಷೆಗಳಲ್ಲಿ ನಮೂದಿಸಿರುವ ರಸ್ತೆಯ ಹೆಸರು ಸಾಂಕೇತಿಕ ಹೆಸರಿನಿಂದ ಭಿನ್ನವಾದಲ್ಲಿ ಭೂ ಉಪಯೋಗವನ್ನು ನಿಗದಿಪಡಿಸಲು ನಿವೇಶನದ ಸ್ಥಾನವನ್ನು ಪರಿಗಣಿಸ ತಕ್ಕದ್ದು.

**9.6.2.** ಅನುಮತಿಸಿರುವ ಭೂ ಉಪಯೋಗದ ಸಂಬಂಧದಲ್ಲಿ ಸಂಬಂಧಪಟ್ಟ ವಲಯದ ನಿಯಮಗಳನ್ನು ಅನ್ವಯಿಸದೆ ಪ್ರತಿಯೊಂದು ನಿರ್ದಿಷ್ಠ ವಲಯದಲ್ಲಿನ ಪ್ರಸ್ತಾವಿತ ಕಟ್ಟಡ ನಕ್ಷೆಯ ಉಪಯೋಗವನ್ನು ಅಳವಡಿಸಿಕೊಳ್ಳತಕ್ಕದ್ದು, ಆದಾಗ್ಯೂ ಮುಂಭಾಗದ ನಡುಜಾಗ, ನಿರ್ದಿಷ್ಟ ವಲಯಕ್ಕೆ ನಿಗದಿ ಪಡಿಸಿರುವುದಕ್ಕಿಂತ ಅಥವಾ ವಲಯದಲ್ಲಿ ಉಪಯೋಗಿಸಲು ಅನುಮತಿಸಿರುವ ನಿಗದಿ ಪಡಿಸಿರುವುದಕ್ಕಿಂತ ಹೆಚ್ಚಿನದಾಗಿರತಕ್ಕದ್ದು.

**ಉದಾಹರಣೆ :–** ವಾಣಿಜ್ಯ ವಲಯದಲ್ಲಿ ವಸತಿ ಉದ್ದೇಶಕ್ಕೆ ಅನುಮತಿ ನೀಡಿದಲ್ಲಿ, ವಾಣಿಜ್ಯ ಅಥವಾ ವಸತಿಯಲ್ಲಿ ಅನ್ವಯಿಸುವ ಹೆಚ್ಚಿನ ನಡುಜಾಗವನ್ನು ಅಳವಡಿಸುವುದನ್ನು ಹೊರತು ಪಡಿಸಿ ವಸತಿ ವಲಯಕ್ಕೆ ಅನ್ವಯಿಸುವ ಇತರ ನಿಯಮಗಳನ್ನು ಮಾತ್ರ ಅಳವಡಿಸ ತಕ್ಕದ್ದು.

**9.6.3.** ಸ್ವತ್ತಿನಲ್ಲಿನ ವಿವಿಧ ಭೂ ಉಪಯೋಗಗಳನ್ನು ನಕ್ಷೆಗಳ ಪ್ರಮಾಣಕ್ಕೆ ಅನುಸಾರವಾಗಿ ಅಳತೆ ಮಾಡದೇ ರಸ್ತೆಯ ಕಡೆಗೆ ಸೂಚಿಸಿರುವ ಭೂ ಉಪಯೋಗವನ್ನು ಪೂರ್ಣ ಸ್ವತ್ತಿನ (ಒಂದು ಸ್ವತ್ತಿನ ಉದ್ದ) ಭೂ ಉಪಯೋಗವೆಂದೇ ಪರಿಗಣಿಸತಕ್ಕದ್ದು.

**9.6.4.** ಒಂದು ನಿರ್ದಿಷ್ಟ ವಲಯದಲ್ಲಿ ಅನುಮತಿಸಬಹುದಾದ ವಿವಿಧ ಭೂ ಉಪಯೋಗಗಳನ್ನು ಕಟ್ಟಡದ ವಿವಿಧ ಅಂತಸ್ತುಗಳಲ್ಲಿ ಸಮ್ಮತಿಸಬಹುದು. ಅಂತಹ ಪ್ರಕರಣಗಳಲ್ಲಿ ಕಟ್ಟಡ ನೆಲ ಅಂತಸ್ತಿನ ಉಪಯೋಗಕ್ಕೆ ಅನ್ವಯವಾಗುವ ನಿಯಮಗಳನ್ನು ಪೂರ್ಣ

ಕಟ್ಟಡಕ್ಕೆ ಅನ್ವಯಿಸತಕ್ಕದ್ದು. ನೆಲ ಅಂತಸ್ತಿನಲ್ಲಿ ಮಿಶ್ರ ಭೂ ಉಪಯೋಗಕ್ಕೆ ಅನುಮತಿ ನೀಡಿದಲ್ಲಿ ಅವುಗಳಲ್ಲಿ ಅತೀ ಹೆಚ್ಚಿನ ಉಪಯೋಗವನ್ನು ನೆಲ ಅಂತಸ್ತಿನ ಉಪಯೋಗವೆಂದು ಪರಿಗಣಿಸತಕ್ಕದ್ದು.

**9.7. ಅಗಲಗಳನ್ನು ವಿಸ್ತೀರ್ಣಗೊಳಿಸಲು ಪ್ರಸ್ತಾಪಿಸಿರುವ ರಸ್ತೆಗಳಿಗೆ ಅಭಿಮುಖ ವಾಗಿರುವ ನಿವೇಶನಗಳು.:–**

ಈ ಉಪವಿಧಿಗಳು ಬರುವ ಮೊದಲು ಪರವಾನಿಗೆ ನೀಡಿರುವ ಕಟ್ಟಡಗಳ ಮೇಲೆ ಮೇಲಿನ ಅಂತಸ್ತುಗಳನ್ನು ಅನುಮತಿಸಿದ ಸಂದರ್ಭದಲ್ಲಿ ಮತ್ತು ಈ ನಿರ್ಮಾಣವು ಅಭಿವೃದ್ಧಿ ಯೋಜನೆಯಲ್ಲಿ ಅಗಲಗೊಳಿಸಲು ಪ್ರಸ್ತಾವಿಸಿರುವ ರಸ್ತೆಗೆ ಅಭಿಮುಖವಾಗಿದ್ದಲ್ಲಿ, ಮೇಲಿನ ಅಂತಸ್ತುಗಳನ್ನು ರಸ್ತೆಯ ಪ್ರಸ್ತಾವಿತ ಅಗಲದ ಗಡಿಯವರೆಗೆ ಅಥವಾ ಕಟ್ಟಡ ರೇಖೆ, ಯಾವುದಾದರು ನಿಗದಿಪಡಿಸಿದಲ್ಲಿ ಅದಕ್ಕೆ ಸೀಮಿತ ಗೊಳಿಸತಕ್ಕದ್ದು.

**9.8. ಅಧಿಕ ನಿರ್ಮಾಣಗಳು, ಬದಲಾವಣೆಗಳು ಮತ್ತು ಮಾರ್ಪಾಡುಗಳು.:–**

i) ಹಾಲಿ ಇರುವ ಕಟ್ಟಡಗಳಿಗೆ ಯಾವುದೇ ಅಧಿಕ ನಿರ್ಮಾಣಗಳು ಬದಲಾವಣೆಗಳು ಮತ್ತು ಮಾರ್ಪಾಡುಗಳಿಗೆ ಈ ಉಪವಿಧಿಗಳ ಅನ್ವಯ ಅನುಮತಿ ನೀಡತಕ್ಕದ್ದು.

ii) ಈ ನಿಯಮಗಳಿಗೆ ಜಾರಿಗೆ ಬರುವುದಕ್ಕೆ ಮೊದಲು ಅಸ್ತಿತ್ವದಲ್ಲಿದ್ದ ಕಟ್ಟಡಗಳ ವಿಷಯದಲ್ಲಿ ಹಾಲಿ ಇರುವ ನಡುಜಾಗಗಳಿಗೆ ಅನುಸಾರವಾಗಿ ಮಾತ್ರ ಮೇಲಿನ ಅಂತಸ್ತುಗಳಿಗೆ ಅನುಮತಿಲಾಗುವುದು. ಆದರೆ ನೊಂದಾಯಿತ ಇಂಜಿನಿಯರ್‌ರವರಿಂದ ತಳಪಾಯ ಭದ್ರತೆ ಪ್ರಮಾಣ ಪತ್ರವನ್ನು ಹಾಜರು ಪಡಿಸುವುದಕ್ಕೆ ಒಳಪಟ್ಟು ಪ್ರಸ್ತಾವಿತ ಉಪವಿಧಿಗಳ ಅನುಸಾರವಾಗಿ ನೆಲ ವಿಸ್ತೀರ್ಣ ಪ್ರದೇಶ ಮತ್ತು ಅಂತಸ್ತುಗಳ ಸಂಖ್ಯೆಯನ್ನು ಮಿತಿಗೊಳಿಸಲಾಗುವುದು.

**9.9. ಒಳಾಂಗಣದ ಬಯಲು ಜಾಗಗಳು:–** ಮಾನವರ ವಾಸಕ್ಕೆ ಉದ್ದೇಶಿಸಲಾದ ಒಂದು ಅಥವಾ ಹೆಚ್ಚು ಕೊಠಡಿಗಳ ಪೂರ್ಣವಾದ ಒಂದು ಪಾರ್ಶ್ವವು, ಯಾವುದೇ ಮುಂಭಾಗ, ಹಿಂಭಾಗ ಅಥವಾ ಪಕ್ಕದ ಬಯಲು ಜಾಗಗಳಿಗೆ ಹೊಂದಿಕೊಂಡಿಲ್ಲದೆ ಇದ್ದಲ್ಲಿ ಕನಿಷ್ಠ 3.00 ಮೀಟರ್ ಅಗಲ ಹೊಂದಿರುವ ಒಳಾಂಗಣ ಬಯಲುಜಾಗಕ್ಕೆ ಹೊಂದಿ ಕೊಂಡಿರತಕ್ಕದ್ದು.

**9.10. ಅಂತಸ್ತು ವಿಸ್ತೀರ್ಣದ ಅನುಪಾತ ಮತ್ತು ಆವೃತ್ತ ಪ್ರದೇಶದ ಪರಿಮಿತಿ:–**

**9.10.1.** ವಸತಿ, ವಾಣಿಜ್ಯ, ಸಾರ್ವಜನಿಕ ಮತ್ತು ಅರೆಸಾರ್ವಜನಿಕ ಮೊದಲಾದ ವಿವಿಧ ರೀತಿಯ ಕಟ್ಟಡಗಳಿಗೆ ಹಾಗೂ ವಿವಿಧ ಅಳತೆಗಳ ನಿವೇಶನಗಳಿಗೆ ಆವೃತ ಪ್ರದೇಶ ಮತ್ತು ಅಂತಸ್ತು ವಿಸ್ತೀರ್ಣದ ಅನುಪಾತಗಳನ್ನು ಹಾಲಿರಸ್ತೆಯ ಅಗಲದ ಪರಿಮಿತಿಗೆ ಒಳಪಟ್ಟು ಕೋಷ್ಟಕ 6 ರಲ್ಲಿ ನೀಡಲಾಗಿದೆ. ಕಟ್ಟಡ ನಿರ್ಮಾಣ ನಿಯಂತ್ರಣದ ಉದ್ದೇಶದಿಂದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಬೆಂಗಳೂರು ನಗರದ ಸ್ಥಳೀಯ ಯೋಜನಾ ಪ್ರದೇಶವನ್ನು 'ಎ', 'ಬಿ' ಮತ್ತು 'ಸಿ' ಪ್ರದೇಶಗಳೆಂದು ಕೆಳಗಿನಂತೆ ವಿಭಾಗಿಸಲಾಗಿದೆ.

'ಎ' – ಅಧಿಕ ಬೆಳವಣಿಗೆ ಹೊಂದಿರುವ ಪ್ರದೇಶ

'ಬಿ' – ಸಾಧಾರಣ ಬೆಳವಣಿಗೆ ಹೊಂದಿರುವ ಪ್ರದೇಶ

'ಸಿ'– ವಿರಳ ಬೆಳವಣಿಗೆ ಹೊಂದಿರುವ ಪ್ರದೇಶ

**ಸೂಚನೆ:–** i) 'ಎ', 'ಬಿ' ಮತ್ತು 'ಸಿ' ಪ್ರದೇಶಗಳ ವಿವರಗಳನ್ನು ತೋರಿಸುವ ನಕ್ಷೆಯು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಛೇರಿಯಲ್ಲಿ ಲಭ್ಯವಿರುತ್ತದೆ. ಈ ನಕ್ಷೆಯ ಒಂದು ಪ್ರತಿಯನ್ನು ಈ ಉಪವಿಧಿಗಳಿಗೆ ಲಗತ್ತಿಸಲಾಗಿದೆ.

ii) ಒಂದೇ ರಸ್ತೆಯ ಎರಡು ಪಾರ್ಶ್ವಗಳು ಎರಡು ವಿವಿಧ ಪ್ರದೇಶಗಳಲ್ಲಿ ಅಂದರೆ 'ಎ' ಮತ್ತು 'ಬಿ' ಅಥವಾ 'ಎ' ಮತ್ತು 'ಸಿ' ಇವುಗಳಲ್ಲಿ ವಿಲೀನಗೊಂಡಿದ್ದರೆ ಎರಡೂ ಪಾರ್ಶ್ವಗಳನ್ನು ಒಂದು ಆಸ್ತಿಯ ಉದ್ದದ ವರೆವಿಗೆ ಅಧಿಕ ಬೆಳವಣಿಗೆ ಹೊಂದಿರುವ ಪ್ರದೇಶ('ಎ'– ಪ್ರದೇಶ)ವೆಂದು ಪರಿಗಣಿಸ ತಕ್ಕದ್ದು.

iii) ಒಂದು ರಸ್ತೆಯ ಎರಡು ಪಾರ್ಶ್ವಗಳು ಎರಡು ವಿವಿಧ ಪ್ರದೇಶಗಳಲ್ಲಿ ಅಂದರೆ 'ಬಿ' ಮತ್ತು 'ಸಿ' ಇವುಗಳಲ್ಲಿ ವಿಲೀನಗೊಂಡಿದ್ದರೆ ಎರಡು ಪಾರ್ಶ್ವಗಳನ್ನು ಒಂದು ಆಸ್ತಿಯ ಉದ್ದದವರೆವಿಗೆ ಸಾಧಾರಣ ಬೆಳವಣಿಗೆ ಹೊಂದಿರುವ ಪ್ರದೇಶ ('ಬಿ'–ಪ್ರದೇಶ)ವೆಂದು ಪರಿಗಣಿಸತಕ್ಕದ್ದು.

**9.10.2.** ಕೆಳಕಂಡ ಕಟ್ಟಡಗಳ ಸಂಬಂಧದಲ್ಲಿ ಗರಿಷ್ಟ ಆವೃತ ಪ್ರದೇಶವನ್ನು ಕೆಳಗಿನಂತೆ ನಿಗದಿ ಪಡಿಸಲಾಗಿದೆ.

| ಕಟ್ಟಡ | | ಅನುಮತಿಸ ಬಹುದಾದ ಗರಿಷ್ಟ ಆವೃತ ಪ್ರದೇಶ |
|---|---|---|
| ಎ. | ಆಸ್ಪತ್ರೆ | ಶೇಕಡ 25.00 |
| ಬಿ. | ಆರೋಗ್ಯ ಕೇಂದ್ರ / ನರ್ಸಿಂಗ್ ಹೋಂ | ಶೇಕಡ 33.33 |
| ಸಿ. | ನರ್ಸರಿ ಶಾಲೆ / ಪ್ರೈಮರಿ ಶಾಲೆ | ಶೇಕಡ 33.33 |
| ಡಿ. | ಸೆಂಕೆಂಡರಿ ಶಾಲೆ | ಶೇಕಡ 30.00 |
| ಇ. | ಕಾಲೇಜು | ಶೇಕಡ 25.00 |

**9.10.3.** (ಎ) ಅಂತಸ್ತು ನೆಲ ವಿಸ್ತೀರ್ಣವು ಗೋಡೆಗಳ ದಪ್ಪ, ವಾಹನ ನಿಲುಗಡೆ ಕ್ಷೇತ್ರ, ಮಹಡಿ ಮೆಟ್ಟಿಲು ಕೊಠಡಿ, ಲಿಫ್ಟ್‌ಕೊಠಡಿ, ರ್‍ಯಾಂಪ್‌ಗಳು, ಎಸ್ಕಲೇಟರ್‌ಗಳು, ಯಂತ್ರಗಳ ಕೊಠಡಿಗಳು, ಬಾಲ್ಕನಿಗಳು, ಸ್ಯಾನಿಟರಿ ಡಕ್ಟ್‌ಗಳನ್ನೊಳಗೊಂಡ ಡಕ್ಟ್‌ಗಳು, ನೀರಿನ ತೊಟ್ಟಿಗಳು, ಮುಖಮಂಟಪ(ಲಾಬಿ)ಗಳು, ಆವಾರ(ಕಾರಿಡಾರ್)ಗಳು, ಫೋಯರ್‌ಗಳು ಮುಂತಾದ ಸಾಮಾನ್ಯ ಸೇವೆಗಾಗಿ ಒದಗಿಸಿರುವ ಇಂತಹ ಇತರ ಭಾಗಗಳನ್ನು ಒಳಗೊಂಡಂತೆ ಕಟ್ಟಡದ ಅಂತಸ್ತುಗಳ ಎಲ್ಲಾ ಭಾಗಗಳ ಒಟ್ಟು ಗೂಡಿಸಿದ ವಿಸ್ತೀರ್ಣವಾಗಿರತಕ್ಕದ್ದು.

(ಬಿ) ಅಂತಸ್ತು ನೆಲ ವಿಸ್ತೀರ್ಣ ಅನುಪಾತವು ಕೆಳಕಂಡ ಉದ್ದೇಶಗಳಿಗಾಗಿ ಉಪಯೋಗಿಸುವ ನೆಲ ವಿಸ್ತೀರ್ಣಕ್ಕೆ ವಿನಾಯಿತಿ ನೀಡತಕ್ಕದ್ದು.

1. ವಾಹನ ನಿಲುಗಡೆ ಪ್ರದೇಶ,
2. ಮಹಡಿ ಮೆಟ್ಟಿಲು ಕೊಠಡಿಗಳು
3. ಲಿಫ್ಟ್ ಕೊಠಡಿಗಳು
4. ರ್‍ಯಾಂಪ್‌ಗಳು
5. ಎಸ್ಕಲೇಟರ್‌ಗಳು
6. ಯಂತ್ರಗಳ ಕೊಠಡಿಗಳು
7. ತೆರೆದ ಬಾಲ್ಕನಿಗಳು
8. ಸ್ಯಾನಿಟರಿಗಳನ್ನೊಳಗೊಂಡ ಡಕ್ಟ್‌ಗಳು ಮತ್ತು
9. ನೀರಿನ ತೊಟ್ಟಿಗಳು.

(ಸಿ) ಕಟ್ಟಡಕ್ಕೆ ಅಗತ್ಯವಿರುವ ವಾಹನ ನಿಲುಗಡೆ ಕ್ಷೇತ್ರಕ್ಕೆ ವಿನಾಯಿತಿ ನೀಡಬಹುದು.

(ಡಿ) ಛಾವಣಿಯ ಮೇಲೆ ನಿರ್ಮಿಸುವ ಕೆಳಕಂಡ ನಿರ್ಮಾಣಗಳಿಂದ ಆವೃತವಾದ ಪ್ರದೇಶವನ್ನು ಅಂತಹ ನಿರ್ಮಾಣಗಳನ್ನು ಮಾಡುವ ಛಾವಣಿ ವಿಸ್ತೀರ್ಣದ ಶೇಕಡ 15ರ ರವರೆವಿಗೆ ಅಂತಸ್ತು ನೆಲ ವಿಸ್ತೀರ್ಣದಿಂದ ಮುಕ್ತಗೊಳಿಸಬಹುದು. ಅವುಯಾವುವೆಂದರೆ;

1. ಮಹಡಿ ಮೆಟ್ಟಿಲು ಕೊಠಡಿಗಳು
2. ಲಿಫ್ಟ್‌ಯಂತ್ರದ ಕೊಠಡಿಗಳು
3. ಪೆಂಟ್ ಹೌಸ್
4. ನೀರಿನ ತೊಟ್ಟಿಗಳು.
5. ಮುಕ್ತವಾಯು ಸಂಚಾರ, ನಿಯಂತ್ರಿತ ವಾಯು ಸಂಚಾರ ಮತ್ತು ಇಂತಹ ಸೇವೆಗಳ ಸಲಕರಣೆಗಳು.

(ಇ). ನಕ್ಷೆಯಲ್ಲಿ ಅಳವಡಿಸುವ ಪಡಸಾಲೆ (Lobbies), ಆವಾರಗಳನ್ನು (Corridors) ಅನುಪಾತಕ್ಕೆ (FAR) ಪರಿಗಣಿಸತಕ್ಕದ್ದು.

(ಎಫ್) ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯ ಪ್ರದೇಶ ಜಿಲ್ಲಾ ನಕ್ಷೆಗಳಲ್ಲಿ ನಮೂದಿಸಿರುವ ಕೆಲವು ರಸ್ತೆಗಳ ನಾಮಾಂಕಿತಗಳು ಭಿನ್ನವಾಗಿರಬಹುದು. ಇಂತಹ ಪ್ರಕರಣಗಳಲ್ಲಿ, ಭೂ ಉಪಯೋಗ ನಿರ್ಧರಿಸುವಾಗ ನಿವೇಶನದ ಸ್ಥಳವನ್ನು ಪರಿಗಣಿಸಬಹುದು.

**ಸೂಚನೆ:–** ಒಂದು ಕಟ್ಟಡದಲ್ಲಿ ಒಂದೇ ಪೆಂಟ್ ಹೌಸ್‌ಗೆ ಅನುಮತಿ ನೀಡಲು ಸಾಧ್ಯವಿದೆ. ಮಹಡಿ ಮೆಟ್ಟಿಲು ಕೋಣೆಯ ವಿಸ್ತೀರ್ಣವನ್ನು ಒಳಗೊಂಡಂತೆ ಪೆಂಟ್‌ಹೌಸಿನ ಕ್ಷೇತ್ರವು 19.00 ಚದರ ಮೀಟರಿಗಿಂತ ಹೆಚ್ಚಿರ ಕೂಡದು. ಈ ಮಿತಿಯೂ ಮೀರಿದ್ದಲ್ಲಿ, ಇಂತಹ ನಿರ್ಮಾಣಗಳನ್ನು ಅಂತಸ್ತು ವಿಸ್ತೀರ್ಣ ಅನುಪಾತದ ಲೆಕ್ಕಕ್ಕೆ ಪರಿಗಣಿಸಲಾಗುವುದು.

**9.10.4.** ಯಾವಾಗ ನಿವೇಶನಗಳು ಅವುಗಳ ಮುಂದೆ ಸೂಚಿಸಿರುವ ಅಗಲದ ರಸ್ತೆಗಳಿಗೆ ಅಭಿಮುಖವಾಗಿ ಇಲ್ಲದೇ ಇದ್ದಲ್ಲಿ ಅನುರೂಪವಾದ ರಸ್ತೆಯ ಅಗಲಕ್ಕೆ ಅನ್ವಯಿಸಬಲ್ಲ ಅಂತಸ್ತು ವಿಸ್ತೀರ್ಣ ಅನುಪಾತವನ್ನು ಅನ್ವಯಿಸತಕ್ಕದ್ದು.

**9.10.5.** ಯಾವಾಗ ನಿವೇಶನವು ಅದರ ಮುಂದೆ ಸೂಚಿಸಿರುವ ಅಗಲದ ರಸ್ತೆಗಿಂತಲೂ ಹೆಚ್ಚು ಅಗಲದ ರಸ್ತೆಗೆ ಅಭಿಮುಖವಾಗಿದ್ದಲ್ಲಿ ಅಂತಸ್ತು ವಿಸ್ತೀರ್ಣ ಅನುಪಾತವನ್ನು ಅಂತಹ ನಿರ್ದಿಷ್ಟ ನಿವೇಶನದ ಕ್ಷೇತ್ರಕ್ಕೆ ನಿಗದಿಪಡಿಸಿರುವ ಪಂಕ್ತಿಗೆ ನಿರ್ಬಂಧಿಸತಕ್ಕದ್ದು.

**9.10.6.** ಕೋಷ್ಟಕ–4 ಮತ್ತು 5 ರಲ್ಲಿ ಯಾವುದು ಅನ್ವಯವಾಗುವುದೋ ಅದರ ಕನಿಷ್ಟ ನಡುಜಾಗಗಳನ್ನು ಅಳವಡಿಸುವ ಷರತ್ತಿಗೆ ಒಳಪಟ್ಟು ನಿವೇಶನದ ಆವೃತ ಪ್ರದೇಶವು ಕೋಷ್ಟಕ–6ರಲ್ಲಿ ನಿಗದಿಪಡಿಸಿರುವ ಗರಿಷ್ಟ ಪ್ರಮಾಣಕ್ಕಿಂತಲೂ ಕಡಿಮೆ ಆದ ಸಂದರ್ಭದಲ್ಲಿ ಅಂತಸ್ತು ವಿಸ್ತೀರ್ಣ ಅನುಪಾತವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳಲು ಹೆಚ್ಚಿನ ಅಂತಸ್ತುಗಳನ್ನು ಮತ್ತು ಎತ್ತರವನ್ನು ಅನುಮತಿಸ ಬಹುದು.

**9.10.7.** ನಡುಜಾಗಗಳು ಮತ್ತು ಆವೃತ ಪ್ರದೇಶವನ್ನು ರಸ್ತೆಯ ಅಗಲವನ್ನು ಗಣನೆಗೆ ತೆಗೆದುಕೊಳ್ಳದೆ ನಿರ್ಧರಿಸತಕ್ಕದ್ದು.

**9.10.8. ಚಲನ ಚಿತ್ರ ಮಂದಿರಗಳಿಗೆ ಕಟ್ಟಡಗಳು:–** ಶಾಶ್ವತವಾದ ಮತ್ತು ಇತರ ಚಲನಚಿತ್ರ ಮಂದಿರಗಳ ಕಟ್ಟಡಗಳ ನಡುಜಾಗಗಳು ಮತ್ತು ಇತರ ಅವಶ್ಯಕತೆಗಳು ಕರ್ನಾಟಕ ಸಿನಿಮಾ (ರೆಗ್ಯುಲೇಷನ್) ಅಧಿನಿಯಮ 1961 ಮತ್ತು ಅದರ ಅಡಿಯಲ್ಲಿನ ನಿಯಮಗಳಿಗೆ ಅನುಸಾರವಾಗಿರತಕ್ಕದ್ದು. ಸದರಿ ಅಧಿನಿಯಮದ ಪ್ರಕಾರ ಚಲನ ಚಿತ್ರ ಮಂದಿರಗಳ ನಿವೇಶನಗಳಲ್ಲಿ ಇತರ ಕಟ್ಟಡವನ್ನು ಅನುಮತಿಸಲು ಅವಕಾಶ ವಿಲ್ಲದಿದ್ದಲ್ಲಿ ಚಲನಚಿತ್ರ ಮಂದಿರದ ಕಟ್ಟಡವನ್ನು ಹೊರತು ಪಡಿಸಿ ಇತರ ಯಾವುದೇ ಕಟ್ಟಡಕ್ಕೆ ಅನುಮತಿ ನೀಡ ತಕ್ಕುದ್ದಲ್ಲ.

**9.10.9.** ಕಲ್ಯಾಣ ಮಂಟಪಗಳಿಗೆ ಕನಿಷ್ಠ ರಸ್ತೆ ಅಗಲಗಳು:–

**ಕೋಷ್ಠಕ – 6ಎ**

| ನಿವೇಶನದ ವಿಸ್ತೀರ್ಣ | ಕನಿಷ್ಠ ರಸ್ತೆಯ ಅಗಲ |
|---|---|
| a) 250 ಚ.ಮೀ. ವರೆಗೆ | 9.00 ಮೀಟರ್ |
| b) 250 ಚ.ಮೀ. ಮೇಲ್ಪಟ್ಟು 500 ಚ.ಮೀ ವರೆಗೆ | 12.00 ಮೀಟರ್ |
| c) 500 ಚ.ಮೀ. ಮೇಲ್ಪಟ್ಟು 1000 ಚ.ಮೀ ವರೆಗೆ | 15.00 ಮೀಟರ್ |
| b) 1000 ಚ.ಮೀ. ಮೇಲ್ಪಟ್ಟು | 18.00 ಮೀಟರ್ |

**10.0** **ಅರೆ–ಬೇರ್ಪಟ್ಟ ಮನೆಗಳು** (ಹಿಂಭಾಗದಿಂದ ಹಿಂಭಾಗಕ್ಕೆ ಅಥವಾ ಪಕ್ಕದಿಂದ ಪಕ್ಕಕ್ಕೆ) ಅರೆ–ಬೇರ್ಪಟ್ಟ ಮನೆಗಳಿಗೆ ಸಂಬಂದಿಸಿದಂತೆ ನಡುಜಾಗಗಳು, ಆವೃತ ಪ್ರದೇಶ ಅಂತಸ್ತು ವಿಸ್ತೀರ್ಣ ಅನುಪಾತ ಮತ್ತು ರಸ್ತೆಯ ಅಗಲವು ಕೋಷ್ಟಕ 7 ರಲ್ಲಿ ನಿಗದಿಪಡಿಸಿರುವಂತೆ ಇರತಕ್ಕದ್ದು.

**ಕೋಷ್ಟಕ–7**
**(ಉಪವಿಧಿ ಸಂಖ್ಯೆ:–10.0)**
**ಅರೆಬೇರ್ಪಟ್ಟ ಮನೆಗಳು**
**(ಹಿಂಭಾಗದಿಂದ ಹಿಂಭಾಗಕ್ಕೆ ಅಥವಾ ಪಕ್ಕದಿಂದ ಪಕ್ಕಕ್ಕೆ)**

| | | |
|---|---|---|
| 1 | ಅಕ್ಕ ಪಕ್ಕ ನಿವೇಶನಗಳ ಕನಿಷ್ಠ ಸಂಯುಕ್ತ ವಿಸ್ತೀರ್ಣ | – 140.00 ಚ.ಮೀ |
| 2 | ಆವೃತ ಪ್ರದೇಶ | ಬಿಡಿ ನಿವೇಶನಗಳಿಗೆ ಅನ್ವಯವಾಗುವಂತೆ |
| 3 | ಅಂತಸ್ತು ವಿಸ್ತೀರ್ಣ ಅನುಪಾತ | |
| 4 | ಅಂತಸ್ತುಗಳ ಗರಿಷ್ಠ ಸಂಖ್ಯೆ | |
| 5 | ರಸ್ತೆಯ ಕನಿಷ್ಠ ಅಗಲ | |
| 6 | ಹಿಂಭಾಗದಿಂದ ಹಿಂಭಾಗದ ನಿವೇಶನಗಳ ಮುಂಭಾಗದ ನಡುಜಾಗಗಳು | ಬಿಡಿ ನಿವೇಶನಗಳ ಪ್ರತಿಯೊಂದು ಫ್ಲಾಟ್‌ನ ಮುಂಭಾಗದ ಮತ್ತು ಹಿಂಭಾಗದ ನಡುಜಾಗಗಳ ಮೊತ್ತಕ್ಕೆ ಸಮಾನವಾಗಿರತಕ್ಕದ್ದು. |
| 7 | ಪಕ್ಕದಲ್ಲಿ ಸೇರಿರುವ ನಿವೇಶನಗಳ ಪಕ್ಕದ ನಡುಜಾಗಗಳು | ಅರೆ ಬೇರ್ಪಟ್ಟ ಕಟ್ಟಡಕ್ಕೆಂದು ಪ್ರಸ್ತಾಪಿಸಲಾದ ನಿವೇಶನಗಳಲ್ಲಿ ಅದನ್ನು ಒಂದು ಬಿಡಿ ನಿವೇಶನವೆಂದು ಪರಿಗಣಿಸಿ ಜಂಟಿ ನಿವೇಶನದ ಒಟ್ಟು ಅಗಲಕ್ಕೆ ಅವಶ್ಯವಿರುವಂತಹ ಎಡ ಮತ್ತು ಬಲ ನಡುಜಾಗಗಳಷ್ಟೆ ಇರತಕ್ಕದ್ದು. |

**11.0** **ಸಾಲುವಸತಿ:** ಸಾಲುವಸತಿ ಘಟಕಗಳು ಒಂದು ನಿವೇಶನದಲ್ಲಿ ಕನಿಷ್ಠ ಮೂರು ವಾಸದ ಘಟಕಗಳು ಮತ್ತು ಗರಿಷ್ಠ ಹನ್ನೆರಡು ವಾಸದ ಘಟಕಗಳನ್ನು ಹೊಂದಿರ ತಕ್ಕದ್ದು ಉಳಿದ ಗೊತ್ತುವಳಿಗಳನ್ನು ಕೋಷ್ಟಕ 8 ರಲ್ಲಿ ಗೊತ್ತುಪಡಿಸಲಾಗಿದೆ.

**ಕೋಷ್ಟಕ–8**
**(ಉಪವಿಧಿ ಸಂಖ್ಯೆ:–11.0)**
**ಸಾಲುವಸತಿ**

| | | |
|---|---|---|
| 1 | ನಿವೇಶನದ ಕನಿಷ್ಠ ಸಂಯುಕ್ತ ಪ್ರದೇಶ | – 210.00 ಚ.ಮೀ |
| 2 | ಪ್ರತಿ ನಿವೇಶನದ ಗರಿಷ್ಠ ಪ್ರದೇಶ | – 108.00 ಚ.ಮೀ |
| 3 | ಆವೃತ ಪ್ರದೇಶ | ಬಿಡಿ ನಿವೇಶನಗಳಿಗೆ ಅನ್ವಯವಾಗುವಂತೆ |
| 4 | ಅಂತಸ್ತು ವಿಸ್ತೀರ್ಣ ಅನುಪಾತ | |
| 5 | ಅಂತಸ್ತುಗಳ ಸಂಖ್ಯೆ | |
| 6 | ರಸ್ತೆಯ ಕನಿಷ್ಠ ಅಗಲ | |
| 7 | ಕನಿಷ್ಟ ನಡುಜಾಗಗಳು | ಮುಂಭಾಗ:–2.00 ಮೀಟರ್ |
| | | ಹಿಂಭಾಗ:–1.50 ಮೀಟರ್ |
| | | ಪಕ್ಕ:–2.00 ಮೀಟರ್ ಕೊನೆಯ ಘಟಕಗಳಿಗೆ ಮಾತ್ರ |

**12.0. ಸಮೂಹ ವಸತಿ:**

**12.1** **ಸಮೂಹ ಕಟ್ಟಡ ನಕ್ಷೆ ಅನುಮೋದನೆಗೆ ನಿಯಮಗಳು:–** ಸಮೂಹ ಕಟ್ಟಡ ರೂಪರೇಖೆ ಅನುಮೋದನೆಗೆ ಈ ಕೆಳಕಾಣಿಸಿದ ನಿಯಮಗಳನ್ನು ಅನುಸರಿಸತಕ್ಕದ್ದು.

(i) ಸರಹದ್ದು ರಸ್ತೆಗಳು ಇದ್ದಲ್ಲಿ, ಅವುಗಳ ಕನಿಷ್ಠ 12 ಮೀ ಅಗಲದವುಗಳಾಗಿರತಕ್ಕದ್ದು.

(ii) ನಿವೇಶನಕ್ಕೆ ಲಗತ್ತಾಗಿರುವ ಸಾರ್ವಜನಿಕ ರಸ್ತೆಯ ಅಗಲಕ್ಕನುಗುಣವಾಗಿ ಅನುಪಾತವನ್ನು (FAR) ಪರಿಗಣಿಸತಕ್ಕದ್ದು ಹಾಗೂ ಉದ್ಯಾನವನ, ಖಾಲಿ ಪ್ರದೇಶ ಮತ್ತು ಸಾರ್ವಜನಿಕ ಸೌಲಭ್ಯಗಳಿಗೆ ಕಾಯ್ದಿರಿಸಿರುವ ಪ್ರದೇಶವನ್ನು ಕಳೆದ ನಂತರ ಅನುಪಾತದ ಲೆಕ್ಕ ಹಾಕತಕ್ಕದ್ದು.

(iii) ನಿವೇಶನದ ಒಟ್ಟಾರೆ ಪ್ರದೇಶದ ಉದ್ದ ಮತ್ತು ಅಗಲಕ್ಕನುಗುಣವಾಗಿ ನಡುಜಾಗಗಳನ್ನು ಒದಗಿಸತಕ್ಕದ್ದು.

(iv) ಬಡಾವಣೆಯ ಒಟ್ಟಾರೆ ಪ್ರದೇಶಕ್ಕನುಗುಣವಾಗಿ ಆವರಿಸುವಿಕೆ ಇರತಕ್ಕದ್ದು.

(v) ಕಟ್ಟಡಗಳ ನಡುವಿನ ಅಂತರವು ಹೆಚ್ಚು ಎತ್ತರದ ಕಟ್ಟಡದ ಅರ್ಧಕ್ಕಿಂತಲೂ ಕಡಿಮೆ ಇರತಕ್ಕದಲ್ಲ.

(vi) ಉದ್ಯಾನವನ ಮತ್ತು ಖಾಲಿ ಪ್ರದೇಶಗಳು ಕನಿಷ್ಠ ಶೇ 15 ಇರುವಂತೆ, ಒಟ್ಟಾರೆ ಪ್ರದೇಶದಲ್ಲಿ ಶೇ 25 ರಷ್ಟು ಸಾರ್ವಜನಿಕ ಸೌಲಭ್ಯ, ಉದ್ಯಾನವನ ಮತ್ತು ಖಾಲಿ ಪ್ರದೇಶಗಳನ್ನು ಕಾಯ್ದಿರಿಸತಕ್ಕದ್ದು.

(vii) ಸಮೂಹ ವಸತಿ ಯೋಜನೆಯಲ್ಲಿನ ಕಟ್ಟಡಗಳ ಬ್ಲಾಕ್‌ಗಳ ಪ್ರವೇಶ ಮಾರ್ಗಗಳ ಅಗಲಗಳು ಈ ಕೆಳಗಿನಂತಿರತಕ್ಕದ್ದು.

| | ಪ್ರವೇಶ ಮಾರ್ಗಗಳ ಉದ್ದ ಮೀಗಳಲ್ಲಿ | ಕನಿಷ್ಠ ಅಗಲ |
|---|---|---|
| ಅ) | 100 ಮೀ ಗಳಿಗಿಂತ ಕಡಿಮೆ | 6.00 ಮೀ |
| ಆ) | 100 ಮೀ ರಿಂದ 200 ಮೀ | 9.00 ಮೀ |
| ಇ) | 200 ಮೀ ಗಳಿಗಿಂತ ಮೇಲ್ಪಟ್ಟು | 12.00 ಮೀ |

(viii) ಪ್ರತಿಯೊಂದು ಉಪ ವಿಭಾಗ ಹೊಂದಿದ ಆಸ್ತಿಗಳ ಒಳ ಪ್ರವೇಶ ಮಾರ್ಗಗಳನ್ನು ಹೊರತುಪಡಿಸಿ, ಪಾರ್ಕ್ ಮತ್ತು ಖಾಲಿ ಪ್ರದೇಶ ಸಾರ್ವಜನಿಕ ಸೌಲಭ್ಯ ಮತ್ತು ರಸ್ತೆಗಳಿಗೆ ಮೀಸಲ್ಪಟ್ಟಿರುವ ಪದೇಶವನ್ನು ಕಾರ್ಯಾದೇಶ ಪತ್ರ ವಿತರಿಸುವ ಮೊದಲು ನೊಂದಾಯಿತ ರಿಲಿಂಕ್ವಿಷ್‌ಮೆಂಟ್ ಡೀಡ್ ಮೂಲಕ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಮೂಕ್ತವಾಗಿ ಹಸ್ತಾಂತರಿಸತಕ್ಕದ್ದು.

**12.2** ಸಮೂಹ ಕಟ್ಟಡಗಳಿಗೆ ಷರತ್ತುಗಳು / ನಿಯಮಗಳು – ಕೋಷ್ಠಕ –9 ರಲ್ಲಿ ಸಮೂಹ ಕಟ್ಟಡಾಳಿಗೆ ಅನ್ವಯಿಸುವ ನಿಯಮಗಳನ್ನು ತಯಾರಿಸಲಾಗಿದೆ.

## ಕೋಷ್ಠಕ–9

**(ಉಪವಿಧಿ ಸಂಖ್ಯೆ:–12.0)**

**ಸಮೂಹ ಕಟ್ಟಡಗಳು**

ನಮೂಹ ಕಟ್ಟಡಗಳಿಗೆ ಸಂಬಂಧಿಸಿದಂತೆ ಗರಿಷ್ಠ ಆವರಿಸುವಿಕೆ, ನೆಲ ಅನುಪಾತ, ಕನಿಷ್ಠ ನಡುಜಾಗಗಳು ಮತ್ತು ಕನಿಷ್ಠ ರಸ್ತೆ ಅಗಲ ಇವುಗಳನ್ನು ಈ ಕೆಳಗೆ ಕೈಗೊಂಡ ಕೋಷ್ಠಕದಲ್ಲಿ ತೋರಿಸಿದೆ.

| ನಿವೇಶನದ ವಿಸ್ತೀರ್ಣ | ಕನಿಷ್ಠ ರಸ್ತೆ ಅಗಲ ಮೀ. ಗಳಲ್ಲಿ | ಗರಿಷ್ಠ ನಿವೇಶನ ಆವಾರಿಸುವಿಕೆ | ಗರಿಷ್ಠ ನೆಲ ಅನುಪಾತ | ಕನಿಷ್ಠ ನಡುಜಾಗಗಳು ಮೀ. ಗಳಲ್ಲಿ | | | |
|---|---|---|---|---|---|---|---|
| | | | | ಮುಂಭಾಗ | ಹಿಂಭಾಗ | ಎಡ | ಬಲ |
| 0.40 ಹೆಕ್ಟೇರ್ ವರೆಗೆ | 12 | 60% | 2.00 | 5.0 | 4.5 | 4.5 | 5.0 |
| 0.40 ರಿಂದ 0.80 ಹೆಕ್ಟೇರ್ ವರೆಗೆ | 15 | 60% | 2.25 | 8.0 | 6.0 | 6.0 | 6.0 |
| 0.80 ಹೆಕ್ಟೇರ್‌ಗೆ ಮೇಲ್ಪಟ್ಟು | 18 | 60% | 2.50 | 9.0 | 8.0 | 8.0 | 8.0 |

ಟಿಪ್ಪಣಿ: 1) ಸಮೂಹ ಕಟ್ಟಡಗಳು ಎಂದರೆ ಒಂದು ನಿವೇಶನದಲ್ಲಿ ಎರಡಕ್ಕಿಂತ ಹೆಚ್ಚು ಕಟ್ಟಡಗಳು, ಒಂದು ಅಥವಾ ಹೆಚ್ಚು ಮಹಡಿಗಳನ್ನು ಹೊಂದಿದ್ದು ಮತ್ತು ಪ್ರತಿಯೊಂದು ಮಹಡಿಯಲ್ಲಿ ಒಂದು ಅಥವಾ ಹೆಚ್ಚು ವಸತಿ ಘಟಕಗಳನ್ನು ಹೊಂದಿರತಕ್ಕ ಕಟ್ಟಡಗಳು. ಅವುಗಳು ಹಾಲಿ ರಸ್ತೆಯಿಂದ ನೇರ ಸಂಪರ್ಕ ಹೊಂದಿರದೇ ಇದ್ದಲ್ಲಿ, 3.5 ಮೀಗೆ ಕಡಿಮೆ ಇಲ್ಲದ ಅಗಲದ ಪ್ರವೇಶ ಮಾರ್ಗಗಳಿಂದ ಅವುಗಳಿಗೆ ಸಂಬಂಧ ಕಲ್ಪಿಸತಕ್ಕದ್ದು, (ಅವುಗಳನ್ನು ಜೋಡಿಸತಕ್ಕದ್ದು).

2) ಎಲ್ಲಾ ಸಮೂಹ ಕಟ್ಟಡಗಳ ನಿವೇಶನದ ವಿಸ್ತೀರ್ಣವು 4000 ಚ.ಮೀ. ಗಳನ್ನು ಮೀರುತ್ತದೆಯೇ, ಅಂತಹ ಕಟ್ಟಡ ನಕ್ಷೆಗಳ ಅನುಮೋದನೆ ಪೂರ್ವದಲ್ಲಿ ವಸತಿ ಕಟ್ಟಡಗಳ ಗುಂಪುಗಳ ಮತ್ತು ಪ್ರತಿಯೊಂದು ಕಟ್ಟಡ ಗುಂಪುಗಳಿಗೆ ಮೀಸಲಿಡಲಾದ ನಿವೇಶನದ ಅಳತೆಗಳು, ಪ್ರವೇಶ ಮಾರ್ಗಗಳ ಮತ್ತು ಸಾರ್ವಜನಿಕ ಸೌಲಭ್ಯ ಪ್ರದೇಶ ಇವುಗಳ ಸಾಮಾನ್ಯ ರಚನೆ (ಏರ್ಪಾಡು) ಗಳನ್ನು ತಯಾರಿಸುವ ರೂಪರೇಖೆ ಅನುಮೋದನೆಯಾಗತಕ್ಕದ್ದು.

**3)** ಸಮೂಹ ಕಟ್ಟಡಗಳ ಎತ್ತರವು 9.3 ಮೀನ್ನು ಮೀರಿದಲ್ಲಿ ಅಂತಹ ಪ್ರಕರಣದಲ್ಲಿ ಆವರಣದ / ಕಟ್ಟಡದ ಸುತ್ತಲೂ ನಡುಜಾಗಗಳನ್ನು ಕೋಷ್ಠಕ 23 ಅಥವಾ ಕೋಷ್ಠಕ 25 ಇವುಗಳಲ್ಲಿ ಯಾವುದು ಹೆಚ್ಚೋ ಅದನ್ವಯ ಬಿಡತಕ್ಕದ್ದು.

13.0 **ಕೈಗಾರಿಕಾ ಕಟ್ಟಡಗಳು:–**

13.1. ವಿವಿಧ ರಸ್ತೆ ಅಗಲಗಳಿಗೆ ಅನುಸಾರವಾಗಿ ಕೈಗಾರಿಕಾ ಕಟ್ಟಡಗಳಿಗೆ ಹೊರ ನಡುಜಾಗಗಳು, ಆವೃತ ಪ್ರದೇಶ ಮತ್ತು ಅಂತಸ್ತು ವಿಸ್ತೀರ್ಣದ ಅನುಪಾತಗಳು, ಕೋಷ್ಠಕ 10 ರಲ್ಲಿ ನಮೂದಿಸಿರುವಂತೆ ಇರತಕ್ಕದ್ದು.

13.2. ಮಹಡಿಗಳನ್ನುಳ್ಳ ಕೈಗಾರಿಕಾ ಕಟ್ಟಡಗಳಿಗೆ ಕನಿಷ್ಟ ನಿವೇಶನದ ವಿಸ್ತೀರ್ಣ, ಗರಿಷ್ಟ ನಿವೇಶನದ ಆವೃತ ಪ್ರದೇಶ, ಗರಿಷ್ಟ ಅಂತಸ್ತು ವಿಸ್ತೀರ್ಣ ಅನುಪಾತ ಮತ್ತು ಕನಿಷ್ಟ ನಡುಜಾಗಗಳು ಕೋಷ್ಠಕ 11 ರಲ್ಲಿ ನಮೂದಿಸಿರುವಂತೆ ಇರತಕ್ಕದ್ದು.

## ಕೋಷ್ಠಕ–10

**(ಉಪವಿಧಿ ಸಂಖ್ಯೆ:–13.1)**

**ಕೈಗಾರಿಕಾ ಕಟ್ಟಡಗಳಿಗೆ ಹೊರಭಾಗದ ನಡುಜಾಗಗಳು, ಆವೃತ್ತ ಪ್ರದೇಶ ಮತ್ತು ಅಂತಸ್ತು ವಿಸ್ತೀರ್ಣ ಅನುಪಾತ.**

| ನಿವೇಶನದ ವಿಸ್ತೀರ್ಣ ಚದರ ಮೀಟರ್‌ಗಳಲ್ಲಿ | ಕೈಗಾರಿಕೆ | ನಿವೇಶನದ ಆವೃತ್ತ ಪ್ರದೇಶ ಗರಿಷ್ಟ | ಕನಿಷ್ಟ ನಡುಜಾಗಗಳು ಮೀಟರ್‌ಗಳಲ್ಲಿ | | ಅಂತಸ್ತು ವಿಸ್ತೀರ್ಣ ಅನುಪಾತ | ರಸ್ತೆಯ ಅಗಲ ಮೀಟರ್‌ಗಳಲ್ಲಿ |
|---|---|---|---|---|---|---|
| | | | ಮುಂಭಾಗ | ಹಿಂಭಾಗ ಮತ್ತು ಪಕ್ಕಗಳು | | |
| 1 | 2 | 3 | 4 | 5 | 6 | 7 |
| 240 ಚ.ಮೀ ವರೆಗೆ | ಸೇವೆ | ಶೇ 75 | 1.00 | --- | 1.00 | 4.50 ಮೀ ಕ್ಕೆ ಮೇಲ್ಪಟ್ಟು |
| 240 ಚ.ಮೀಗೆ ಮೇಲ್ಪಟ್ಟು 1000 ಚ.ಮೀ ವರೆಗೆ | ಸೇವೆ ಮತ್ತು ಲಘು | ಶೇ 50 | 4.50 | 4.50 | 0.75 | 6.00 ಮೀ ಕ್ಕೆ ಮೇಲ್ಪಟ್ಟು |

| 1 | 2 | 3 | 4 | 5 | 6 | 7 |
|---|---|---|---|---|---|---|
| 1000 ಚ.ಮೀಗೆ ಮೇಲ್ಪಟ್ಟು 2000 ಚ.ಮೀ ವರೆಗೆ | ಸೇವೆ ಮತ್ತು ಲಘು | ಶೇ 40 | 6.00 | 6.00 | 0.75 | 9.00 ಮೀ ಕ್ಕೆ ಮೇಲ್ಪಟ್ಟು |
| 2000 ಚ.ಮೀಗೆ ಮೇಲ್ಪಟ್ಟು 3000 ಚ.ಮೀ ವರೆಗೆ | ಸೇವೆ, ಲಘು ಮತ್ತು ಮಾಧ್ಯಮ | ಶೇ 40 | 10.00 | 10.00 | 0.75 | 12.00 ಮೀ ಕ್ಕೆ ಮೇಲ್ಪಟ್ಟು |
| 3000 ಚ.ಮೀಗೆ ಮೇಲ್ಪಟ್ಟು 4000 ಚ.ಮೀ ವರೆಗೆ | ಸೇವೆ, ಲಘು ಮತ್ತು ಮಾಧ್ಯಮ | ಶೇ 40 | 12.00 | 12.00 | 0.50 | 12.00 ಮೀ ಕ್ಕೆ ಮೇಲ್ಪಟ್ಟು |
| 4000 ಚ.ಮೀಗೆ ಮೇಲ್ಪಟ್ಟು | ಸೇವೆ, ಲಘು, ಮಾಧ್ಯಮ ಮತ್ತು ಭಾರಿ | ಶೇ 35 | 15.00 | 15.00 | 0.50 | 12.00 ಮೀ ಕ್ಕೆ ಮೇಲ್ಪಟ್ಟು |

ಸೂಚನೆ:– ಮೇಲಿನ ಕೋಷ್ಠಕದ ಪ್ರಕಾರ ಕನಿಷ್ಟ ನಡುಜಾಗಗಳನ್ನು ಬಿಟ್ಟ ನಂತರ ನಿವೇಶನದ ಉಳಿದ ಭಾಗವನ್ನು ಕಟ್ಟಡ ನಿರ್ಮಾಣಕ್ಕೆ ಉಪಯೋಗಿಸಲು ಸಾಧ್ಯವಾಗದಿದ್ದಲ್ಲಿ ಪ್ರಾಧಿಕಾರವು ವಾಸದ ಕಟ್ಟಡಗಳಿಗೆ ಅನ್ವಯವಾಗುವ ನಡುಜಾಗಗಳನ್ನು ಒತ್ತಾಯಿಸತಕ್ಕದ್ದು.

## ಕೋಷ್ಠಕ–11

**(ಉಪವಿಧಿ ಸಂಖ್ಯೆ:–13.2)**

**ಮಹಡಿಗಳುಳ್ಳ ಕೈಗರಿಕಾ ಕಟ್ಟಡಗಳಿಗಾಗಿ ನಿಬಂಧನೆಗಳು**

| | | |
|---|---|---|
| 1 | ಕನಿಷ್ಟ ನಿವೇಶನದ ವಿಸ್ತೀರ್ಣ | – 1000 .ಚ.ಮೀ |
| 2 | ಗರಿಷ್ಟ ಆವೃತ ಪ್ರದೇಶ | – ಶೇ. 40 |
| 3 | ಗರಿಷ್ಟ ಅಂತಸ್ತು ವಿಸ್ತೀರ್ಣ ಅನುಪಾತ | – ರಸ್ತೆಯ ಅಗಲ 9 ಮೀಟರ್ ವರೆವಿಗೆ –1.50 ಮತ್ತು ರಸ್ತೆಯ ಅಗಲ 9 ಮೀಟರ್ ಮ್ಯೇಲ್ಪಟ್ಟು 1.75 |
| 4 | ಕನಿಷ್ಟ ನಡುಜಾಗಗಳು | – ಎ) ಮುಂಭಾಗ – 8 ಮೀಟರ್<br>– ಬಿ) ಹಿಂಭಾಗ –4.5 ಮೀಟರ್<br>– ಸಿ) ಪಕ್ಕಗಳು –4.5 ಮೀಟರ್ |

**ಸೂಚನೆ :–** ಕಟ್ಟಡದ ಎತ್ತರ 9.50 ಮೀಟರ್‌ಗಿಂತಲೂ ಹೆಚ್ಚಾಗಿದ್ದಲ್ಲಿ ಕೋಷ್ಟಕ 5 ಮತ್ತು 11ರ ಪ್ರಕಾರ ಯಾವುದು ಹೆಚ್ಚೋ ಅದು ಕನಿಷ್ಟ ನಡುಜಾಗವಾಗತಕ್ಕದ್ದು.

14.0 **ಬಯಲು ಜಾಗಗಳಲ್ಲಿ ವಿನಾಯಿತಿ :**

ಬಯಲು ಜಾಗಗಳಲ್ಲಿ ಈ ಕೆಳಕಂಡ ವಿನಾಯಿತಿಗಳನ್ನು ಅನುಮತಿಸತಕ್ಕದ್ದು.

14.1 **ಹೊರ ಚಾಚಿರುವ ಭಾಗಗಳು:–**

(i) ಒಳಭಾಗ ಅಥವಾ ಹೊರಭಾಗದಲ್ಲಿ ಹವಣಿಸಿರುವ ಪ್ರತಿ ಬಯಲುಜಾಗವು ಯಾವುದೇ ನಿರ್ಮಾಣದಿಂದ ಮುಕ್ತವಾಗಿರತಕ್ಕದ್ದು ಮತ್ತು ಆಕಾಶದ ವರೆವಿಗೂ ಖಾಲಿ ಇರತಕ್ಕದ್ದು ಮತ್ತು ಕಾರ್ನಿಸು, ಛಾವಣಿ ಅಥವಾ ವೆದರ್‌ಷೇಡ್ ಅಥವಾ ಚಜ್ಜಾ ಇವು 0.75 ಮೀಟರ್ ಅಗಲ ಅಥವಾ ಖಾಲಿ ಜಾಗದ ಮೂರನೇ ಒಂದು ಭಾಗ ಇವುಗಳಲ್ಲಿ ಯಾವುದು ಕಡಿಮೆಯೋ ಅದಕ್ಕಿಂತಲೂ ಹೆಚ್ಚಾಗಿ ಬಯಲು ಜಾಗದಲ್ಲಿ ಜೋತಾಡು ತಕ್ಕದ್ದಲ್ಲ ಅಥವಾ ಹೊರಚಾಚಿರತಕ್ಕದ್ದಲ್ಲ ಈ ಹೊರ ಚಾಚುಗಳನ್ನು ಯಾರೊಬ್ಬರ ಸ್ವಂತ ನಿವೇಶನದ ಗಡಿಗಳ ಒಳಭಾಗದಲ್ಲಿ ಅನುಮತಿಸತಕ್ಕದ್ದು.

(ii) ತಳ ಅಂತಸ್ತಿನಲ್ಲಿ ಅಥವಾ ನೆಲ ಅಂತಸ್ತಿನ ನೆಲದ ಮೇಲೆ ಕನಿಷ್ಟ ನಡುಜಾಗದಲ್ಲಿ ಯಾವುದೇ ಹೊರಚಾಚು ಜೋತಾಡ ತಕ್ಕದ್ದಲ್ಲ ಅಥವಾ ಹೊರಚಾಚಿರ ತಕ್ಕದ್ದಲ್ಲ

14.2 **ಚಾಚು ತೊಲೆ ದ್ವಾರ ಮಂಟಪ:–**

3 ಮೀಟರ್ ಅಗಲ (ಗರಿಷ್ಠ) ಮತ್ತು 4.5 ಮೀಟರ್ ಉದ್ದದ (ಗರಿಷ್ಠ) ಚಾಚು ತೊಲೆ ದ್ವಾರಮಂಟಪವನ್ನು ನೆಲಮಹಡಿಯಲ್ಲಿ ಪಕ್ಕದ ನಡುಜಾಗದಲ್ಲಿ ಅನುಮತಿಸಬಹುದು. ಕುಳಿತು ಕೊಳ್ಳುವ ಸ್ಥಳವಾಗಿ ಉಪಯೋಗವಾಗದಂತೆ ದ್ವಾರಮಂಟಪದ ಮೇಲ್ಭಾಗಕ್ಕೆ ಹೋಗುವ ಪ್ರವೇಶ ಮಾರ್ಗಕ್ಕೆ ಅನುಮತಿ ನೀಡಲು ಅವಕಾಶವಿಲ್ಲ. ಮೇಲುಪಾಯದ ಮಟ್ಟಕ್ಕಿಂತ ದ್ವಾರಮಂಟಪವು 2 ಮೀಟರ್‌ಗಿಂತಲೂ ಹೆಚ್ಚಿರತಕ್ಕದಲ್ಲ. ದ್ವಾರಮಂಟಪದ ಛಾವಣಿಯು ಆಕಾಶದವರೆವಿಗೂ ಖಾಲಿ ಇರತಕ್ಕದ್ದು. ಅನುಮತಿ ನೀಡಿದ್ದಲ್ಲಿ ದ್ವಾರಮಂಟಪವು ಆಸ್ತಿಯ ಹದ್ದಿನಿಂದ ಕನಿಷ್ಟ 1 ಮೀಟರ್ ಸ್ವಷ್ಟ ಬಯಲು ಜಾಗವನ್ನು ಹೊಂದಿರತಕ್ಕದ್ದು.

14.3 **ಬಾಲ್ಕನಿ:** ಬಾಲ್ಕನಿಯ ಹೊರಚಾಚನ್ನು ಕಟ್ಟಡಕ್ಕೆ ಸಮಕೋನದಲ್ಲಿ ಬಾಲ್ಕನಿಯ ತುತ್ತ ತುದಿಯವರೆವಿಗೆ ಅಳತೆ ಮಾಡತಕ್ಕದ್ದು. ನಡುಜಾಗದ ಮೂರನೇ ಒಂದು ಭಾಗಕ್ಕಿಂತಲೂ ಹೆಚ್ಚಿಲ್ಲದಂತೆ ಮೊದಲನೆ ಅಂತಸ್ತಿನಲ್ಲಿ ಗರಿಷ್ಟ 1.10 ಮೀಟರ್, ಎರಡನೇ ಅಂತಸ್ತು ಮತ್ತು ಅದರ ಮೇಲಿನ ಅಂತಸ್ತುಗಳಲ್ಲಿ ಗರಿಷ್ಟ 1.75 ಮೀಟರ್‌ವರೆವಿಗೆ ಬಾಲ್ಕನಿಯ ಚಾಚು ತೊಲೆ ಹೊರಚಾಚುವಿಗೆ ಅನುಮತಿ ನೀಡಬಹುದು. ನೆಲೆ ಅಂತಸ್ತಿನ ನೆಲ ಮಟ್ಟದಲ್ಲಿ ಯಾವುದೇ ಬಾಲ್ಕನಿಗೆ ಅನುಮತಿ ನೀಡಲು ಅವಕಾಶವಿಲ್ಲ. ಬಾಲ್ಕನಿಯ ಉದ್ದವನ್ನು ಕಟ್ಟದ ಪ್ರತಿ ಪಾರ್ಶ್ವದ ಉದ್ದದ ಮೂರನೇ ಒಂದು ಭಾಗಕ್ಕೆ ಮಿತಿಗೊಳಿಸ ತಕ್ಕದ್ದು.

14.4. **ಅಡ್ಡಗೋಡೆ :–** ಕಟ್ಟಡ ಮತ್ತು ಆವರಣಗೋಡೆಯನ್ನು ಸೇರಿಸುವ ಅಡ್ಡಗೋಡೆಯನ್ನು 1.50 ಮೀಟರ್ ಎತ್ತರಕ್ಕೆ ಮಿತಿಗೊಳಿಸಿ ಅನುಮತಿಸಬಹುದು.

15.0 **ಎತ್ತರದ ಮಿತಿ :–**

15.1 ಕಟ್ಟಡದ ಎತ್ತರವು ಸಂಬಂಧಪಟ್ಟ ಕೋಷ್ಟಕಗಳಲ್ಲಿ ಗೊತ್ತು ಪಡಿಸಿರುವಂತೆ ಅಂತಸ್ತು ವಿಸ್ತೀರ್ಣ ಅನುಪಾತ, ಆವೃತ ಪ್ರದೇಶ, ನಡುಜಾಗಗಳು ಮತ್ತು ನಿವೇಶನವು ಅಭಿಮುಖವಾಗಿರುವ ರಸ್ತೆಯ ಅಗಲ ಇವುಗಳ ಪರಿಮಿತಿಗೆ ಒಳಪಟ್ಟಿರುತ್ತದೆ.

15.2 ಕಟ್ಟಡವು ಎರಡು ಅಥವಾ ಅದಕ್ಕಿಂತ ಹೆಚ್ಚಿನ ವಿವಿಧ ಅಗಲಗಳ ರಸ್ತೆಗಳಿಗೆ ಹೊಂದಿಕೊಂಡಿದ್ದರೆ, ಕಟ್ಟಡದ ಎತ್ತರವನ್ನು ಹೆಚ್ಚು ಅಗಲದ ರಸ್ತೆಗೆ ಅನುಸಾರವಾಗಿ ನಿರ್ಬಂಧಿಸತಕ್ಕದ್ದು.

15.3 ವಿಮಾನ ನಿಲ್ದಾಣಗಳ ಸಾನಿಧ್ಯದಲ್ಲಿ ವಿಮಾನವು ಕೆಳಕ್ಕೆ ಇಳಿಯುವ ಮತ್ತು ಮೇಲಕ್ಕೆ ಹೋಗುವ ವಲಯಗಳಲ್ಲಿ ಬರುವ ಕಟ್ಟಡಗಳ ಗರಿಷ್ಟ ಎತ್ತರವು ಮೇಲೆ 15.1 ರಲ್ಲಿ ಅನುಮತಿಸುವ ಅಥವಾ ಕೋಷ್ಟಕ 12ರ ಅನ್ವಯ ಯಾವುದು ಕಡಿಮೆಯೋ ಅದನ್ನು ಅಳವಡಿಸತಕ್ಕದ್ದು. ಇವುಗಳನ್ನು ಸಕ್ಷಮ ವಿಮಾನ ನಿಲ್ದಾಣ ಪ್ರಾಧಿಕಾರದಿಂದ ವಿಮಾನ ನಿಲ್ದಾಣಗಳ ಸಾನಿಧ್ಯದಲ್ಲಿ ಕಟ್ಟಡ ನಿರ್ಮಾಣಗಳನ್ನು ನಿಯಂತ್ರಿಸುವ ನಿಯಮಗಳಿಂದ ನಿಯಂತ್ರಿಸತಕ್ಕದ್ದು.

15.4 **ಛಾವಣಿಗಳ ಮೇಲಿನ ನಿರ್ಮಾಣಗಳಿಗೆ ಎತ್ತರದಲ್ಲಿ ವಿನಾಯಿತಿ:** ಕೆಳಕಂಡ ಸಮುಚಿತ ನಿರ್ಮಾಣಗಳನ್ನು ಕಟ್ಟಡಗಳ ಎತ್ತರಕ್ಕೆ ಒಳಪಡಿಸತಕ್ಕದಲ್ಲ.

(i) ನೀರಿನ ತೊಟ್ಟಿಗಳು ಮತ್ತು ಅವುಗಳ ಆಧಾರಗಳು, ವಾಯು ಸಂಚಾರದ ಉಪಕರಣಗಳು, ಹವಾನಿಯಂತ್ರಣ ಮತ್ತು ಇಂತಹುದೇ ಸೇವೆಗಳು, ಲಿಫ್ಟ್ ಕೊಠಡಿಗಳು, ಛಾವಣಿಯ ಮೇಲೆ ನಿರ್ಮಿಸುವ ಮಹಡಿ ಮೆಟ್ಟಿಲು ಕೊಠಡಿ ಪೆಂಟ್‌ಹೌಸ್, ಹೊಗೆಗಿಂಡಿಗಳು, ಪ್ಯಾರಪೆಟ್ ಗೋಡೆಗಳು ಮತ್ತು ಇತರ ವಾಸ್ತುಶಿಲ್ಪ ವಿನ್ಯಾಸಗಳು.

(ii) ಎತ್ತರದಲ್ಲಿ ವಿನಾಯಿತಿ ಕೇಳಲು ಪ್ಯಾರಪೆಡ್‌ಗೋಡೆಯ ಎತ್ತರ ಮತ್ತು ವಾಸ್ತುಶಿಲ್ಪ ವಿನ್ಯಾಸಗಳು ಒಂದು ಮೀಟರ್‌ಗಿಂತ ಹೆಚ್ಚಿರತಕ್ಕದ್ದಲ್ಲ, ಮತ್ತು ಇತರ ನಿರ್ಮಾಣಗಳ ಎತ್ತರ 4.50 ಮೀಟರ್‌ಗಿಂತಲೂ ಹೆಚ್ಚಿರತಕ್ಕದ್ದಲ್ಲ.

(iii) ಅಂತಹ ನಿರ್ಮಾಣಗಳ ಒಟ್ಟು ಗೂಡಿಸಿದ ಕ್ಷೇತ್ರವು ಉಪವಿಧಿ 9.10.3 (ಡಿ)ಯಲ್ಲಿ ನಿಗದಿಪಡಿಸಿರುವ ಕ್ಷೇತ್ರಕ್ಕಿಂತಲೂ ಹೆಚ್ಚಿರಕೂಡದು. ಈ ಮಿತಿಯು ಹೆಚ್ಚಾದ್ದಲ್ಲಿ, ಈ ನಿರ್ಮಾಣಗಳನ್ನು ಕಟ್ಟಡದ ಎತ್ತರವನ್ನು ಎಣಿಕೆ ಮಾಡಲು ಗಣನೆಗೆ ತೆಗೆದುಕೊಳ್ಳತಕ್ಕದ್ದು.

**ಕೋಷ್ಠಕ–12**

**(ಉಪವಿಧಿಗಳ ಸಂಖ್ಯೆ:–15.3)**

**ವಿಮಾನ ನಿಲ್ದಾಣಗಳ ಸಾನಿಧ್ಯದಲ್ಲಿ ಎತ್ತರದ ಮಿತಿ**

(ಎ). ಅಂತರಾಷ್ಟ್ರೀಯ ವಿಮಾನ ನಿಲ್ದಾಣಗಳು ಮತ್ತು ಅವುಗಳ ಬದಲಿ ವ್ಯವಸ್ಥೆಗಳು:–

| | ವಿಮಾನ ನಿಲ್ದಾಣ ಬಿಂದುವಿನಿಂದ ಕಟ್ಟಡಗಳಿಗೆ / ನಿರ್ಮಾಣಗಳಿಗೆ ಅಥವಾ ಸ್ಥಾಪನೆಗಳಿಗೆ ಸಮತಲವಾಗಿ ಅಳತೆ ಮಾಡಲಾದ ದೂರದ ಪರಿಮಿತಿ. | ಕಟ್ಟಡದ ನಿರ್ಮಾಣಗಳು ಅಥವಾ ಸ್ಥಾಪನೆಗಳ ಎತ್ತರದ ಮೇಲ್ಭಾಗದ ತುದಿ ಮತ್ತು ವಿಮಾನ ನಿಲ್ದಾಣಗಳ ಎತ್ತರದ ನಡುವಿನ ವ್ಯತ್ಯಾಸ. (ವಿಮಾನ ನಿಲ್ದಾಣ ಉಲ್ಲೇಖ ಬಿಂದು). |
|---|---|---|
| 1 | 8534.00 ಮೀ. ಮತ್ತು 22224.00 ಮೀ ನಡುವೆ | 152.00 ಮೀ. ಗಿಂತ ಕಡಿಮೆ. |
| 2 | 7315.00 ಮೀ. ಮತ್ತು 8534.00 ಮೀ ನಡುವೆ | 122.00 ಮೀ. ಗಿಂತ ಕಡಿಮೆ. |
| 3 | 6096.00 ಮೀ. ಮತ್ತು 7315.00 ಮೀ ನಡುವೆ | 91.00 ಮೀ. ಗಿಂತ ಕಡಿಮೆ. |
| 4 | 4877.00 ಮೀ. ಮತ್ತು 6096.00 ಮೀ ನಡುವೆ | 61.00 ಮೀ. ಗಿಂತ ಕಡಿಮೆ. |
| 5 | 4267.00 ಮೀ. ಮತ್ತು 4877.00 ಮೀ ನಡುವೆ | 49.00 ಮೀ. ಗಿಂತ ಕಡಿಮೆ. |
| 6 | 3658.00 ಮೀ. ಮತ್ತು 4267.00 ಮೀ ನಡುವೆ | 37.00 ಮೀ. ಗಿಂತ ಕಡಿಮೆ. |
| 7 | 3048.00 ಮೀ. ಮತ್ತು 3658.00 ಮೀ ನಡುವೆ | 24.00 ಮೀ. ಗಿಂತ ಕಡಿಮೆ. |
| 8 | 2438.00 ಮೀ. ಮತ್ತು 3048.00 ಮೀ ನಡುವೆ | 12.00 ಮೀ. ಗಿಂತ ಕಡಿಮೆ. |
| 9 | 2438.00 ಮೀ. ಗಿಂತ ಕೆಳಗೆ | ಇಲ್ಲ– ಸ್ಥಳೀಯ ವಿಮಾನ ನಿಲ್ದಾಣ ಪ್ರಾಧಿಕಾರದ ಪೂರ್ವ ಸಹಮತಿಯ ಹೊರತು. |

(ಬಿ). ಇತರ ನಾಗರಿಕ ವಿಮಾನ ನಿಲ್ದಾಣಗಳು ಮತ್ತು ನಾಗರಿಕ ಏರೋಡ್ರೋಂಗಳು

| | | |
|---|---|---|
| 1 | 7925.00 ಮೀ. ಮತ್ತು 22324.00 ಮೀ ನಡುವೆ | 152.00 ಮೀ. ಗಿಂತ ಕಡಿಮೆ. |
| 2 | 6706.00 ಮೀ. ಮತ್ತು 7925.00 ಮೀ ನಡುವೆ | 122.00 ಮೀ. ಗಿಂತ ಕಡಿಮೆ. |
| 3 | 5486.00 ಮೀ. ಮತ್ತು 6706.00 ಮೀ ನಡುವೆ | 91.00 ಮೀ. ಗಿಂತ ಕಡಿಮೆ. |
| 4 | 4267.00 ಮೀ. ಮತ್ತು 5486.00 ಮೀ ನಡುವೆ | 61.00 ಮೀ. ಗಿಂತ ಕಡಿಮೆ. |
| 5 | 3658.00 ಮೀ. ಮತ್ತು 4267.00 ಮೀ ನಡುವೆ | 49.00 ಮೀ. ಗಿಂತ ಕಡಿಮೆ. |
| 6 | 3048.00 ಮೀ. ಮತ್ತು 3658.00 ಮೀ ನಡುವೆ | 37.00 ಮೀ. ಗಿಂತ ಕಡಿಮೆ. |
| 7 | 2438.00 ಮೀ. ಮತ್ತು 3048.00 ಮೀ ನಡುವೆ | 24.00 ಮೀ. ಗಿಂತ ಕಡಿಮೆ. |
| 8 | 1829.00 ಮೀ. ಮತ್ತು 2438.00 ಮೀ ನಡುವೆ | 12.00 ಮೀ. ಗಿಂತ ಕಡಿಮೆ. |
| 9 | 1829.00 ಮೀ. ಗಿಂತ ಕೆಳಗೆ | ಇಲ್ಲ–ಸ್ಥಳೀಯ ವಿಮಾನ ನಿಲ್ದಾಣ ಪ್ರಾಧಿಕಾರದ ಪೂರ್ವ ಸಹಮತಿಯ ಹೊರತು. |

**ಟಿಪ್ಪಣಿ:–**

1. ಕ್ರ.ಸಂ. 7,8 ಮತ್ತು 9ಕ್ಕಾಗಿ ಅದರಲ್ಲಿ ಸೂಚಿಸಿರುವ ಅಂತರದ ಪರಿಮಿತಿಗಳೊಳಗೆ ಮರಗಳನ್ನು ನೆಡತಕ್ಕದಲ್ಲ.

2. ವಿಮಾನ ನಿಲ್ದಾಣದಿಂದ ಅವುಗಳ ಅಂತರ (ದೂರ) ಏನೇ ಇದ್ದರೂ (ವಿಮಾನ ನಿಲ್ದಾಣ / ವಿಮಾನ ನಿಲ್ದಾಣದ ಉಲ್ಲೇಖ ಬಿಂದುವಿನ 22224.00 ಮೀಟರ್ ಹೊರಗೆ) ಸಂಬಂಧಪಟ್ಟ ನಾಗರೀಕ ವಿಮಾನ ನಿಲ್ದಾಣ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೆ 152 ಮೀಟರ್ ಗಿಂತ ಹೆಚ್ಚು ಎತ್ತರದ ರೇಡಿಯೋ ಮಾಸ್ಟ್‌ಗಳನ್ನು ಅಥವಾ ಅದೇ ರೀತಿಯ ಇತರ ಸ್ಥಾಪನೆಗಳನ್ನು ನಿರ್ಮಿಸತಕ್ಕುದಲ್ಲ.
3. ಸ್ಥಳೀಯ ಪ್ರಾಧಿಕಾರದೊಡನೆ ಪೂರ್ವಭಾವಿ ಸಮಾಲೋಚನೆ ಇಲ್ಲದೇ ಕೋಷ್ಟಕ 12 ರ (ಎ) ಮತ್ತು (ಬಿ) ಯಲ್ಲಿ ಸೂಚಿಸಿರುವ ಎತ್ತರವನ್ನು ಮೀರುವ ಕಟ್ಟಡ ನಿರ್ಮಾಣಗಳ ಅಥವಾ ಸ್ಥಾಪನೆಗಳಿಗೆ ಅನುಮತಿಸಲಾಗುವುದಿಲ್ಲ.
4. ಕಸಾಯಿ ಖಾನೆ ಮತ್ತು ಕಸರಾಶಿ ಹಾಕುವ ಚಟುವಟಿಕೆಗಳ ಇತರ ಪ್ರದೇಶಗಳು ಹದ್ದು, ಗಿಡುಗ ಮುಂತಾದ ಅತಿ ಎತ್ತರ ಹಾರುವ ಪಕ್ಷಿಗಳನ್ನು ಆಕರ್ಷಿಸುವುದರಿಂದ ಅಂತಹ ಸ್ಥಳಗಳಿಗೆ ವಿಮಾನ ನಿಲ್ದಾಣ ಉಲ್ಲೇಖ ಬಿಂದುವಿನಿಂದ 10 ಕಿ.ಮೀ ಸುತ್ತಳತೆಯೊಳಗೆ ಅನುಮತಿಸಲಾಗುವುದಿಲ್ಲ.

**16.0. ವಾಹನ ನಿಲುಗಡೆ ಸ್ಥಳ:** ಈ ಮುಂದಿನ ಗೊತ್ತುವಳಿಗಳಿಗೆ ಒಳಪಟ್ಟು ಕೋಷ್ಠಕ 13 ರಲ್ಲಿ ನೀಡಿರುವ ಪ್ರಮಾಣಗಳಿಗೆ ಅನುಸಾರವಾಗಿ ನಿವೇಶನಗಳಲ್ಲಿ ವಾಹನಗಳ ನಿಲುಗಡೆಗಾಗಿ ಸಾಕಷ್ಟು ಸ್ಥಳಾವಕಾಶವನ್ನು ಒದಗಿಸತಕ್ಕದ್ದು.

(ಎ) ಮೋಟಾರು ವಾಹನಗಳಿಗೆ ರಸ್ತೆಯ ಹೊರಗಿನ ಕಾರು ನಿಲುಗಡೆ ಸ್ಥಳವು 18 ಚ.ಮೀ(3.00ಮೀX6.00ಮೀ) ಗಿಂತಲೂ ಕಡಿಮೆ ಕ್ಷೇತ್ರ ಹೊಂದಿರತಕ್ಕದಲ್ಲ. ಮೋಟಾರು ಸೈಕಲ್ ಮತ್ತು ಸ್ಕೂಟರ್‌ಗಳಿಗೆ ಪ್ರತಿ ವಾಹನ ನಿಲುಗಡೆ ಸ್ಥಳವು ಕ್ರಮವಾಗಿ 2.50 ಚ.ಮೀ(1.25ಮೀX2.00ಮೀ)ಗಿಂತಲೂ ಕಡಿಮೆ ಕ್ಷೇತ್ರ ಹೊಂದಿರ ತಕ್ಕದಲ್ಲ ಮತ್ತು ಸೈಕಲುಗಳಿಗಾಗಿ 1.50 ಚ.ಮೀ(0.75 ಮೀX 2.00ಮೀ) ಗಿಂತಲೂ ಕಡಿಮೆ ಕ್ಷೇತ್ರ ಹೊಂದಿರತಕ್ಕದಲ್ಲ.

(ಬಿ) ರಸ್ತೆಯ ಹೊರಗಿನ ಕಾರು ನಿಲುಗಡೆಯ ಪ್ರದೇಶಕ್ಕೆ ರಸ್ತೆಯನ್ನು ಪ್ರವೇಶಿಸಲು ಸಾಕಷ್ಟು ವಾಹನ ಮಾರ್ಗವನ್ನು ಅಳವಡಿಸತಕ್ಕದ್ದು ಮತ್ತು ಚಾಲನೆ ಮಾರ್ಗಗಳ ಪ್ರದೇಶವು ಕನಿಷ್ಟ 2.50 ಮೀ. ಅಗಲ ಹೊಂದಿರಬೇಕು, ವಾಹನಗಳ ಚಲನಕ್ಕೆ ಅಗತ್ಯವಾದ ಕಟ್ಟಡದ ಪಾರ್ಶ್ವ ಮತ್ತು ಇತರ ಏರ್ಪಾಡುಗಳು ಈ ಉಪವಿಧಿಗಳಲ್ಲಿ ಗೊತ್ತುಪಡಿಸಿರುವ ವಾಹನ ನಿಲುಗಡೆ ಸ್ಥಳವನ್ನು ಹೊರತು ಪಡಿಸಿರತಕ್ಕದ್ದು.

(ಸಿ) ಅಧಿಕ ಬೆಳವಣಿಗೆ ಹೊಂದಿರುವ ಪ್ರದೇಶದಲ್ಲಿ 100.00 ಚ.ಮೀ ಅಂತಸ್ತು ವಿಸ್ತೀರ್ಣ ಕ್ಷೇತ್ರದ ವರೆವಿಗೆ ಯಾವುದೇ ವಾಹನ ನಿಲುಗಡೆ ಸ್ಥಳವನ್ನು ಒತ್ತಾಯಿಸತಕ್ಕದ್ದಲ್ಲ.

(ಡಿ) ಬಹು ಅಂತಸ್ತಲ್ಲದ ಕಟ್ಟಡಗಳ ಪ್ರಕರಣದಲ್ಲಿ ನಡುಜಾಗವು 6 ಮೀಟರ್ ಅಗಲ ಹೊಂದಿದಲ್ಲಿ ವಾಹನ ನಿಲುಗಡೆ ಸ್ಥಳವನ್ನು ನಡುಜಾಗದಲ್ಲಿ ಒದಗಿಸಬಹುದು ಅಂತಹ ಸಂದರ್ಭಗಳಲ್ಲಿ ಕಟ್ಟಡದಿಂದ 3.00 ಮೀಟರ್ ಕನಿಷ್ಟ ಅಂತರವನ್ನು ಮುಕ್ತವಾಗಿರಿಸತಕ್ಕದು.

(ಇ) ಬಹು ಅಂತಸ್ತಿನ ಕಟ್ಟಡಗಳ ಪ್ರಕರಣದಲ್ಲಿ ಕಟ್ಟಡದ ಸುತ್ತಲೂ ಅಗ್ನಿಶಾಮಕ ವಾಹನ ಸಂಚರಿಸುವುದಕ್ಕೆ ಕನಿಷ್ಠ 6.00 ಮೀಟರ್ ನಡುಜಾಗವನ್ನು ಬಿಟ್ಟು ವಾಹನ ನಿಲುಗಡೆ ಸ್ಥಳವನ್ನು ಒದಗಿಸಬಹುದು.

(ಎಫ್) ಪರ್ಯಾಯ ವ್ಯವಸ್ಥೆಯಾಗಿ ಅಂದರೆ, ತಾರಸಿಯ ಮೇಲೆ ವಾಹನ ನಿಲುಗಡೆ, ಬಹುಹಂತಗಳಲ್ಲಿ ವಾಹನ ನಿಲುಗಡೆ ಮತ್ತು ವಾಹನ ನಿಲುಗಡೆಯ ಸಿಲೋಸ್‌ಗಳಲ್ಲಿ ಪ್ರಾಧಿಕಾರಿಗಳಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸುವಿಕೆಯ ಷರತ್ತುಗೊಳಪಡಿಸಿ ವಾಹನ ನಿಲುಗಡೆಯನ್ನು ಅನುಮತಿಸ ತಕ್ಕದ್ದು (ಬಹು ಅಂತಸ್ತಿನ ಕಟ್ಟಡಗಳಂತಹವುಗಳಿಗೆ) ಇಂತಹ ಪ್ರಕರಣಗಳಿಗೆ ತಳ ಅಂತಸ್ತುಗಳಿಗೆ ನಿಖರವಾಗಿ 3.60 ಮೀಟರ್ ಎತ್ತರವನ್ನು ಅಳವಡಿಸತಕ್ಕದ್ದು ಹಾಗೂ ಪ್ರತಿ ಘಟಕದ ವಾಹನ ನಿಲುಗಡೆಯ ಜಾಗದ ಕಾಯ್ದಿರಿಸುವಿಕೆಯನ್ನು ಪ್ರಾಧಿಕಾರವು ತೀರ್ಮಾನಿಸ ತಕ್ಕದ್ದು.

(ಜಿ) ಮೇಲಿನ ಅಂತಸ್ತುಗಳಿಗೆ ತಲುಪಲು ಕನಿಷ್ಠ ನಡುಜಾಗವನ್ನು ಬಿಟ್ಟು ರ‍್ಯಾಂಪ್‌ಗಳನ್ನು ಒದಗಿಸಿದಲ್ಲಿ ಮಾತ್ರ, ಅಂತಹ ಅಂತಸ್ತುಗಳಿಗೆ ವಾಹನ ನಿಲುಗಡೆಯನ್ನು ಅನುಮತಿಸಬಹುದಾಗಿದೆ.

(ಹೆಚ್) ಒಟ್ಟಾರೆ ಕಟ್ಟಡದ ಎತ್ತರ 15.00 ಮೀ ಮೀರದ ಸಂದರ್ಭದಲ್ಲಿ ಸ್ಟಿಲ್ಟ್ಸ್ ವಾಹನ ನಿಲುಗಡೆ ಅಂತಸ್ತನ್ನು ಕಟ್ಟಡದ ಒಟ್ಟಾರೆ ಎತ್ತರಕ್ಕೆ ಮತ್ತು ಪ್ರತ್ಯೇಕ ಅಂತಸ್ತು ಎಂಬುದಾಗಿ ಪರಿಗಣಿಸದೇ ಅನುಮತಿಸತಕ್ಕದ್ದು.

**ಕೋಷ್ಟಕ–13**

**(ಉಪವಿಧಿಗಳ ಸಂಖ್ಯೆ:–16.0)**

**ವಾಹನ ನಿಲುಗಡೆಯ ಸ್ಥಳದ ಅವಶ್ಯಕತೆಗಳು**

| ಕ್ರ. ಸಂ | ಉಪಯೋಗದ ವಿಧಾನ | ಒಂದು ಕಾರು ನಿಲುಗಡೆ ಸ್ಥಳವನ್ನು ಈ ಮುಂದಿನ ಪ್ರತಿಯೊಂದಕ್ಕೆ ಒದಗಿಸತಕ್ಕದ್ದು. |
|---|---|---|
| 1. | (ಅ) ಶಿಕ್ಷಣ ಸಂಸ್ಥೆಗಳನ್ನು ಹೊರತುಪಡಿಸಿ ಚಲನಚಿತ್ರ ಮಂದಿರಗಳನ್ನು ಒಳಗೊಂಡು ಥಿಯೇಟರುಗಳು ಮತ್ತು ಆಡಿಟೋರಿಯಂಗಳು.<br>(ಆ) ಮಲ್ಟಿ ಪ್ಲೆಕ್ಸ್ ಚಿತ್ರಮಂದಿರಗಳು | ಕನಿಷ್ಠ 20ಕ್ಕೆ ಒಳಪಟ್ಟು 25 ಆಸನಗಳಿಗೆ ಸ್ಥಳಾವಕಾಶ.<br>ಕನಿಷ್ಠ 10ಕ್ಕೆ ಒಳಪಟ್ಟು 25 ಆಸನಗಳಿಗೆ ಸ್ಥಳಾವಕಾಶ. |
| 2. | ಚಿಲ್ಲರೆ ವ್ಯಾಪಾರಗಳು | ಅಂತಸ್ತು ವಿಸ್ತೀರ್ಣ– ಪ್ರತಿ 50 ಚ.ಮೀ |
| 3. | ಸಗಟು ಮತ್ತು ಉಗ್ರಾಣ ಕಟ್ಟಡಗಳು | 150 ಚ.ಮೀ. ಅಂತಸ್ತು ವಿಸ್ತೀರ್ಣ ಜೊತೆಗೆ ಪ್ರತಿ 500 ಚ.ಮೀ ಅಥವಾ ಅದರ ಭಾಗಕ್ಕೆ 4 X 8 ಮೀ. ಅಳತೆಯ ಒಂದು ಲಾರಿ ನಿಲ್ದಾಣ ಸ್ಥಳ. |

| ಕ್ರ. ಸಂ | ಉಪಯೋಗದ ವಿಧಾನ | ಒಂದು ಕಾರು ನಿಲುಗಡೆ ಸ್ಥಳವನ್ನು ಈ ಮುಂದಿನ ಪ್ರತಿಯೊಂದಕ್ಕೆ ಒದಗಿಸತಕ್ಕದ್ದು. |
|---|---|---|
| 4. | ರೆಸ್ಟೋರೆಂಟ್‌ಗಳು ಆಹಾರ ಮತ್ತು ಪಾನೀಯಗಳನ್ನು ಒದಗಿಸುವ ಉದ್ಯಮಗಳು ಮತ್ತು ಅಂತಹ ಇತರ ಉದ್ಯಮಗಳು. | ಹಾಲ್, ಡೈನಿಂಗ್ ರೂಮ್, ಪ್ಯಾಂಟ್ರಿ ಮತ್ತು ಬಾರ್‌ಗಳು ನೆಲ ವಿಸ್ತೀರ್ಣ ಸೇರಿದಂತೆ – ಪ್ರತಿ 25 ಚ.ಮೀ. |
| 5. | ವಸತಿ ಗೃಹಗಳು ಮತ್ತು ಪ್ರವಾಸಿಗೃಹಗಳು. | 4 ಕೊಠಡಿಗಳು |
| 6. | ಕಛೇರಿ ಕಟ್ಟಡಗಳು (ಸರ್ಕಾರಿ: ಅರೆಸರ್ಕಾರಿ ಮತ್ತು ಖಾಸಗಿ) | 50 ಚ.ಮೀ. ಕಛೇರಿ ನೆಲ ವಿಸ್ತೀರ್ಣ |
| 7. | ವಿದ್ಯಾರ್ಥಿ ನಿಲಯಗಳು | 10 ಕೊಠಡಿಗಳು |
| 8. | ಕೈಗಾರಿಕಾ ಕಟ್ಟಡಗಳು | ಪ್ರತಿ 100 ಚ.ಮೀ. ಅಂತಸ್ತು ವಿಸ್ತೀರ್ಣ ಜೊತೆಗೆ ಪ್ರತಿ 1000 ಚ.ಮೀ ಅಥವಾ ಅದರ ಭಾಗಕ್ಕೆ 4 X 8 ಮೀ. ಅಳತೆಯ ಒಂದು ಲಾರಿ ನಿಲ್ದಾಣ ಸ್ಥಳ. |
| 9. | (ಎ) ನರ್ಸಿಂಗ್ ಹೋಂಗಳು ಮತ್ತು ಆಸ್ಪತ್ರೆಗಳು. | 4 ಹಾಸಿಗೆಗಳು |
| 10. | (i) ಒಂದು ಕುಟುಂಬ ವಾಸದ ಘಟಕಗಳು | ಎ) ಪ್ರತಿ 100 ಚ.ಮೀ. ಮೇಲ್ಪಟ್ಟು 150 ಚ.ಮೀ. ವರೆಗಿನ ವಿಸ್ತೀರ್ಣದ ವಾಸದ ಘಟಕ.<br>ಬಿ) 150 ಚ.ಮೀ. ಮೇಲ್ಪಟ್ಟ ಪ್ರತಿ 100 ಚ.ಮೀ. ಮತ್ತು ಅದರ ಭಾಗಕ್ಕೆ. |
| | (ii) ಬಹು ಕುಟುಂಬ ವಾಸದ ಘಟಕಗಳು | ಎ) 50 ಚ.ಮೀ. ಅಥವಾಅದಕ್ಕಿಂತ ಕಡಿಮೆ ವಿಸ್ತೀರ್ಣದ 2 ವಾಸದ ಘಟಕ.<br>ಬಿ) ಪ್ರತಿ 50 ಚ.ಮೀ. ಮೇಲ್ಪಟ್ಟು 150 ಚ.ಮೀ. ವರೆಗಿನ ವಿಸ್ತೀರ್ಣದ ವಾಸದ ಘಟಕಗಳು.<br>ಸಿ) 150 ಚ.ಮೀ. ಮೇಲ್ಪಟ್ಟ ಪ್ರತಿ 100 ಚ.ಮೀ. ಮತ್ತು ಅದರ ಭಾಗಕ್ಕೆ. |
| 11. | ಕಲ್ಯಾಣ ಮಂದಿರಗಳು | ಸಭಾಂಗಣದ ಅಂತಸ್ತು ವಿಸ್ತೀರ್ಣ–ಪ್ರತಿ 10 ಚ.ಮೀ. |
| 12. | ಮನರಂಜನಾ ಕ್ಲಬ್‌ಗಳು | ಅಂತಸ್ತು ವಿಸ್ತೀರ್ಣ–ಪ್ರತಿ 50 ಚ.ಮೀ. |
| 13. | ಶೈಕ್ಷಣಿಕ ಕಟ್ಟಡಗಳು | ಅಂತಸ್ತು ವಿಸ್ತೀರ್ಣ–ಪ್ರತಿ 200 ಚ.ಮೀ. |
| 14. | ಇತರ ಸಾರ್ವಜನಿಕ ಮತ್ತು ಅರೆ ಸಾರ್ವಜನಿಕ ಕಟ್ಟಡಗಳು. | ಅಂತಸ್ತು ವಿಸ್ತೀರ್ಣ–ಪ್ರತಿ 100 ಚ.ಮೀ. |

**ಸೂಚನೆ:** ಕ್ರಮ ಸಂಖ್ಯೆ: 5, 6, 7, 9, 10(ii), 12, 13 ಮತ್ತು 14 ರಲ್ಲಿನ ವಸತಿ ಮತ್ತು ವಾಣಿಜ್ಯ ಕಟ್ಟಡಗಳಿಗೆ ಅನ್ವಯಿಸುವಂತೆ ಮೇಲೆ ನಮೂದಿಸಿರುವ ಅವಶ್ಯಕ ವಾಹನ ನಿಲುಗಡೆಯ ಜೊತೆಗೆ ಬೇಟಿ ಕೊಡುವವರ (visitors) ವಾಹನಗಳಿಗೆ ಶೇ 10 ರಂತೆ ಹೆಚ್ಚುವರಿಯಾಗಿ ವಾಹನ ನಿಲುಗಡೆಯ ಸ್ಥಳವನ್ನು ಅಳವಡಿಸತಕ್ಕದ್ದು.

**17.0. ರಸ್ತೆಗಳು ಸಂಧಿಸುವ ಸ್ಥಳದಲ್ಲಿ ಕಟ್ಟಡಗಳು:–** ರಸ್ತೆಗಳು ಸಂಧಿಸುವ ಸ್ಥಳದಲ್ಲಿ ಸಂಧಿಸುವ ಬಿಂದುವಿನಿಂದ ನಿವೇಶನದ ಮುಂಭಾಗದ ಅಳತೆಯ ಕನಿಷ್ಟ ಶೇಕಡ 10.00 ಅಥವಾ 3.00. ಮೀಟರ್ ಇವುಗಳಲ್ಲಿ ಯಾವುದು ಕಡಿಮೆಯೋ ಅದರ ಅಳತೆಯನ್ನು ಬಿಟ್ಟು ನಿವೇಶನದ ಗಡಿಯ ಮೂಲೆಗಳನ್ನು ವೃತ್ತಾಕಾರ ಮಾಡಲು ಅಥವಾ ಕತ್ತರಿಸತಕ್ಕದ್ದು. ಮುಂದುವರಿದು ನೆಲ ಅಂತಸ್ತಿನ ಎತ್ತರದ ವರೆವಿಗೆ ನಿವೇಶನದ ಗಡಿಯ ವೃತ್ತಾಕಾರದ ಅಥವಾ ಕತ್ತರಿಸಿದ ಮೂಲೆಗೆ ಸಮಾನಾಂತರವಾಗಿ ಕಟ್ಟಡದ ಮೂಲೆಯನ್ನು ವೃತ್ತಾಕಾರಗೊಳಿಸಲು ಅಥವಾ ಕತ್ತರಿಸಲು ಪ್ರಾಧಿಕಾರವು ಅಗತ್ಯಪಡಿಸಬಹುದು. ಇಂತಹ ಪ್ರಕರಣಗಳಲ್ಲಿ ಅಂತಸ್ತು ವಿಸ್ತೀರ್ಣ ಅನುಪಾತವನ್ನು ನಿವೇಶನದ ಒಟ್ಟು ಕ್ಷೇತ್ರಕ್ಕೆ ಅನುಮತಿಸತಕ್ಕದ್ದು, ಕಟ್ಟಡಗಳಿಗೆ ಪ್ರವೇಶ ಮಾರ್ಗ ಮತ್ತು ನಿರ್ಗಮನ ಮಾರ್ಗಗಳನ್ನು ರಸ್ತೆಗಳು ಸಂಧಿಸುವ ಬಿಂದುವಿನಿಂದ ದೂರದಲ್ಲಿ ಒದಗಿಸತಕ್ಕದ್ದು.

**18.0. ತಳ ಅಂತಸ್ತು:–**

**18.1**

ಎ) ತಳ ಅಂತಸ್ತಿನಲ್ಲಿ ವಾಹನ ನಿಲುಗಡೆ ಹಾಗೂ ಕಟ್ಟಡದ ಸೇವೆ ಮತ್ತು ಬಳಸುವ ಉಪಯೋಗಕ್ಕೆ ಯಂತ್ರಗಳ ಅಳವಡಿಕೆಗಳನ್ನು ಹೊರತು ಪಡಿಸಿ ಇತರೆ ಯಾವುದೇ ಉಪಯೋಗಕ್ಕೆ ಬಳಸ ತಕ್ಕದ್ದಲ್ಲ.

ಬಿ) ಬ್ಯಾಂಕ್ ಕಟ್ಟಡಗಳಲ್ಲಿ ಮಾತ್ರ ಭದ್ರತಾ ಕೊಠಡಿಗಳು. ಸದರಿ ಉಪಯೋಗಕ್ಕೆ ಬಳಸಲಾಗುವ ಪ್ರದೇಶದ ವಿಸ್ತೀರ್ಣವನ್ನು ಅನುಪಾತದಲ್ಲಿ ಸೇರಿಸಿಕೊಂಡು ಲೆಕ್ಕ ಹಾಕತಕ್ಕದ್ದು.

ಸಿ) 50 ಹಾಸಿಗೆಗಳ ಮೇಲ್ಪಟ್ಟ ಆಸ್ಪತ್ರೆ ಕಟ್ಟಡಗಳಲ್ಲಿ ಮಾತ್ರ ಕಛೇರಿ ಅಲ್ಲದ ರೇಡಿಯಾಲಜಿ ಮತ್ತು ಎಕ್ಸ್‌ರೇ ಯಂತ್ರೋಪಕರಣಗಳ ಅಳವಡಿಕೆಗಾಗಿ ಸದರಿ ಉಪಯೋಗಕ್ಕೆ ಬಳಸಲಾಗುವ ಪ್ರದೇಶದ ವಿಸ್ತೀರ್ಣವನ್ನು ಅನುಪಾತದಲ್ಲಿ ಸೇರಿಸಿಕೊಂಡು ಲೆಕ್ಕ ಹಾಕತಕ್ಕದ್ದು.

**18.2** ಅಧಿಕ ಬೆಳವಣಿಗೆ ಹೊಂದಿರುವ ಪ್ರದೇಶ ('ಎ'–ಪ್ರದೇಶ)ದಲ್ಲಿ ನಿವೇಶನದ ವಿಸ್ತೀರ್ಣವು 500 ಚ.ಮೀ ಅಥವಾ ಅದಕ್ಕಿಂತಲೂ ಹೆಚ್ಚಾದಲ್ಲಿ ಹಾಗೂ 12 ಮೀಟರ್ ಕನಿಷ್ಠ ರಸ್ತೆ ಅಗಲ ಇದ್ದಲ್ಲಿ ಒಂದು ತಳ ಅಂತಸ್ತನ್ನು ವಾಹನ ನಿಲುಗಡೆ ಉದ್ದೇಶಕ್ಕಾಗಿ ಮಾತ್ರ ಅನುಮತಿಸಬಹುದು.

**18.3** ತಳ ಅಂತಸ್ತಿಗೆ, ಪ್ರವೇಶ ಮಾರ್ಗದ ಮತ್ತು ನಿರ್ಗಮನ ಮಾರ್ಗಗಳನ್ನು ಅನುಕೂಲಕರ'ವಾಗಿ ಒದಗಿಸ'ತಕ್ಕದ್ದು, ಪ್ರಾಧಿಕಾರ'ಕ್ಕೆ ತೃಪ್ತಿಕರ'ವಾಗುವ ರೀತಿಯಲ್ಲಿ ಸಾಕಷ್ಟು ಒಳಚರ'ಂಡಿ ವ್ಯವಸ್ಥೆ, ಮುಕ್ತ ವಾಯು ಸ'ಂಚಾರ' ವ್ಯವಸ್ಥೆ, ಮತ್ತು ಬೆಳಕಿನ ವ್ಯವಸ್ಥೆಯನ್ನು ಮಾಡತಕ್ಕದ್ದು.

**18.4** ಕಟ್ಟಡದ ನೆಲ ಅಂತಸ್ತಿನ ಮೇಲುಪಾಯವನ್ನು, ನಿಗದಿಪಡಿಸಿರ'ುವ ಕನಿಷ್ಟ ನಡುಜಾಗಕ್ಕಿಂತಲೂ ಹೆಚ್ಚಾಗಿ ಬಿಟ್ಟು ನಿರ್ಮಿಸಿರ'ುವ ಸ'ಂದರ್ಭದಲ್ಲಿ, ತಳ ಅಂತಸ್ತ'ನ್ನು ಈ ಮೇಲುಪಾಯದಿಂದ ಹೊರ'ಗಡೆಗೆ ಬದಲಾಯಿಸ'ಬಹುದು; ಆದರ' ತಳ ಅಂತಸ್ತಿನ ಯಾವುದೇ ಭಾಗವು, ನಿವೇಶನದಲ್ಲಿ ಕಟ್ಟಡಕ್ಕೆ ನಿಗದಿ ಪಡಿಸಿರ'ುವ ಕನಿಷ್ಟ ನಡುಜಾಗಗಳಿಗಿಂತಲೂ ಹೆಚ್ಚಿಗೆ ಬದಲಾಯಿಸ'ತಕ್ಕುದ್ದಲ್ಲ.

**18.5** ಕೋಷ್ಟಕ–4ರ'ಲ್ಲಿ 2.00ಮೀಟರಿಗಿಂತಲೂ ಕಡಿಮೆ ನಿಗದಿ ಪಡಿಸಿರ'ುವ ನಡುಜಾಗಗಳನ್ನು ಹೊಂದಿರ'ುವ ನಿವೇಶನಗಳಲ್ಲಿ ತಳಮಹಡಿಯನ್ನು ಅನುಮತಿಸ'ಲಾಗುವುದಿಲ್ಲ. ಇಂತಹ ಸ'ಂದರ್ಭಗಳಲ್ಲಿ ನಡುಜಾಗಗಳನ್ನು ಎರ'ಡು ಮೀಟರ'್ವರ'ೆವಿಗಾದರ'ೂ ಹೆಚ್ಚಿಸಿದಾಗ ತಳ ಅಂತಸ್ತಿಗೆ ಅನುಮತಿ ನೀಡಬಹುದು.

**18.6** ವಾಹನ ನಿಲುಗಡೆ ಉದ್ದೇಶಕ್ಕಾಗಿ ಅಲ್ಲದೇ ಇತರ' ಉದ್ದೇಶಗಳಿಗಾಗಿ ಉಪಯೋಗಿಸುವ ತಳ ಅಂತಸ್ತಿಗೆ ಕಟ್ಟಡದ ಒಳಭಾಗದಿಂದ ಪ್ರವೇಶವಿರ'ತಕ್ಕದ್ದು.

**18.7.** (i) ನೆಲದಿಂದ ಛಾವಣಿ ಚಪ್ಪಡಿಯ /ಬೀಮ್ /ಸೀಲಿಂಗ್‌ನ ತಳ ಭಾಗದ ವರ'ೆವಿಗೆ (ಯಾವುದು ಕಡಿಮೆಯೋ) ಪ್ರತಿ ತಳ ಅಂತಸ್ತು ಕಡೆಯ ಪಕ್ಷ 2.40 ಮೀಟರ'್ ಎತ್ತರ' ಹೊಂದಿರ' ತಕ್ಕದ್ದು ಮತ್ತು ಈ ಎತ್ತರ'ವು 2.75 ಮೀಟರ'್ಗಿಂತಲೂ ಹೆಚ್ಚಿರ'ಕೂಡದು. ಬಹು ಅಂತಸ್ತಿನ ಕಟ್ಟಡಗಳು / ಮೂರ'ು ನಕ್ಷತ್ರಗಳು / ಐದು ನಕ್ಷತ್ರಗಳ ಹೋಟೆಲ್ ಸ'ಂಕೀರ್ಣಗಳ ಪ್ರಕರ'ಣಗಳಲ್ಲಿ ಯಂತ್ರೋಪಕರ'ಣಗಳ ಅಳವಡಿಕೆ ಮತ್ತು ಚಾಲನೆ ಮಿತಿಯಲ್ಲಿಡಲು ಅಥವಾ ಕಡೆಯ ಪಕ್ಷ ಒಂದು ಮಟ್ಟದ ವಾಹನ ನಿಲುಗಡೆಗೆ ಯಾಂತ್ರಿಕ ಲಿಫ್ಟ್ ಉಪಯೋಗಿಸಿದ್ದಲ್ಲಿ ಎರ'ಡು ಮಟ್ಟಡ ವಾಹನ ನಿಲುಗಡೆ ಅಳವಡಿಸ'ಲು ಹೆಚ್ಚಿನ ಎತ್ತರ' ಅವಶ್ಯವಿದ್ದಲ್ಲಿ ಎತ್ತರ'ವನ್ನು 3.60ಮೀಟರ'್ ವರ'ೆವಿಗೆ ಹೆಚ್ಚಾಗುವಂತೆ ತಳ ಅಂತಸ್ತಿನ ನೆಲವನ್ನು ಕೆಳಕ್ಕೆ ಇಳಿಸ'ಬಹುದು. ಈ ಎತ್ತರ'ದ ಹೆಚ್ಚಳವನ್ನು ಯಂತ್ರಗಳಿಗೆ ಅಥವಾ ಕಾರ'ು ನಿಲುಗಡೆಗಾಗಿ ಅಗತ್ಯವಿರ'ುವ ಪ್ರದೇಶಕ್ಕೆ ಮಾತ್ರ ಸೀಮಿತಗೊಳಿಸ'ತಕ್ಕದ್ದು, ಇಂತಹ ಎತ್ತರ'ದ ಹೆಚ್ಚಳಕ್ಕೆ ಅನುಮತಿ ನೀಡಲು ಅರ್ಜಿದಾರ'ರ'ು ಅಗ್ನಿಶಾಮಕ ಇಲಾಖೆಯ ಮುಕ್ತತೆ ಪ್ರಮಾಣ ಪತ್ರವನ್ನು ಒದಗಿಸ'ತಕ್ಕದ್ದು.

(ii) ತಳ ಅಂತಸ್ತಿಗೆ ಸಾಕಷ್ಟು ಮುಕ್ತ ವಾಯು ಸ'ಂಚಾರ' ವ್ಯವಸ್ಥೆಯನ್ನು ಒದಗಿಸ'ತಕ್ಕದ್ದು. ಮುಕ್ತವಾಯು ಸ'ಂಚಾರ'ದ ಮಟ್ಟವು ಈ ಕಟ್ಟಡ ಉಪವಿಧಿಗಳ ಪ್ರಕಾರ' ನಿರ್ದಿಷ್ಟ ಅಧಿಭೋಗಕ್ಕೆ ಅಗತ್ಯವಿರ'ುವ ಮಟ್ಟದಷ್ಟೇ ಇರ'ತಕ್ಕದ್ದು. ಈ ವ್ಯವಸ್ಥೆಯಲ್ಲಿನ ಯಾವುದೇ ಕೊರ'ತೆಯನ್ನು ಬ್ಲೋಯರ'್ಗಳು, ಗಾಳಿಯನ್ನು ಹೊರ'ದೂಡುವ ಪಂಕ, ಹವಾನಿಯಂತ್ರಿತ ಸ್ಥಾವರ'ಗಳು ಮೊದಲಾದವುಗಳ ರ'ೂಪದಲ್ಲಿ ಸಾಕಷ್ಟು ಯಾಂತ್ರೀಕೃತ ವಾಯು ಸ'ಂಚಾರ' ವ್ಯವಸ್ಥೆಯನ್ನು ಒದಗಿಸುವುದರ' ಮೂಲಕ ನಿವಾರಿಸ' ಬಹುದು.

(iii) ತಳ ಅಂತಸ್ತಿನ ಮುಂಚಾಚುವಿಕೆಯು ಸ'ರ'ಾಸ'ರಿ ನೆಲ ಮಟ್ಟದಿಂದ ಒಂದು ಮೀಟರ'್ಗಿಂತಲೂ ಹೆಚ್ಚಿರ'ತಕ್ಕದ್ದಲ್ಲ.

(iv) ಮೇಲ್ಮೈ ಚರ'ಂಡಿಯ ನೀರ'ು ತಳ ಅಂತಸ್ತ'ನ್ನು ಪ್ರವೇಶಿಸುವುದಿಲ್ಲವೆಂದು ಖಚಿತ ಪಡಿಸಿಕೊಳ್ಳಲು ಅವಶ್ಯಕವಾದ ಏರ್ಪಾಡುಗಳನ್ನು ಮಾಡತಕ್ಕದ್ದು.

**18.8.** ತಳ ಅಂತಸ್ತ'ನ್ನು ಸಾಮಾನ್ಯವಾಗಿ ವಿಭಾಗಿಸ'ತಕ್ಕುದಲ್ಲ. ಉಪವಿಧಿ 18.7ರ' (ii).ನೇ ಉಪವಾಕ್ಯದಲ್ಲಿ ವಿಧಿಸಿರ'ುವ ಮುಕ್ತ ವಾಯು ಸ'ಂಚಾರ' ವ್ಯವಸ್ಥೆಯ ಮಟ್ಟವನ್ನು ಒದಗಿಸ'ಲು ಸಾಧ್ಯವಾದಲ್ಲಿ ತಳ ಅಂತಸ್ತಿನ ವಿಭಾಗಕ್ಕೆ ಅನುಮತಿ ನೀಡಬಹುದು.

**18.9.** ತಳ ಅಂತಸ್ತಿನಲ್ಲಿ ಅಗ್ನಿಯನ್ನು ಶಮಿಸ'ಲು ಸಾಕಷ್ಟು ಸ'ಂರ'ಕ್ಷಣೆಗಳನ್ನು ಒದಗಿಸ'ತಕ್ಕದ್ದು. ಅಗ್ನಿಯ ಉಪಟಕದಿಂದ ಕಡೆಯ ಪಕ್ಷ ಎರ'ಡುಘಂಟೆಗಳ ನಿರ'ೋದ ಶಕ್ತಿ ಒದಗಿಸ'ಬಲ್ಲ ಆರ'್.ಸಿ.ಸಿ ಅಥವಾ ಇತರ' ವಸ'್ತುಗಳಿಂದ ತಳ ಅಂತಸ್ತು ಮತ್ತು ಆದರ' ಮೇಲಿನ ಅಂತಸ್ತ'ನ್ನು ಪ್ರತ್ಯೇಕಗೊಳಿಸುವ ಛಾವಣಿಯನ್ನು ನಿರ್ಮಿಸ'ತಕ್ಕದ್ದು. ಬಹು ಕುಟುಂಬ ವಸ'ತಿ ಘಟಕಗಳು (ನಿವಾಸ' ಫ್ಲಾಟ್‌ಗಳು) ಮತ್ತು ಹೋಟೆಲ್ಲುಗಳಲ್ಲಿ ತಳಅಂತಸ್ತಿಗೆ ಅನುಮತಿ ನೀಡಿದಾಗ ಮಾಲೀಕರ'ು ತಳಅಂತಸ್ತಿನ ನಕ್ಷೆಯನ್ನು ಪ್ರವೇಶ ದ್ವಾರ'ದಲ್ಲಿ ಪ್ರದರ್ಶಿಸಿಸ' ತಕ್ಕದ್ದು. ತಳ ಅಂತಸ್ತಿನ ಛಾವಣಿಯಲ್ಲಿ ಲೋಹದ ಅಂಗುಸ್ಥಾನಗಳನ್ನು (ಲೋಹದ ತಂತಿಗಳು / ಹಗ್ಗಗಳಿಗೆ ತೂಗು ಹಾಕಿರ'ುವ ಲೋಹದ ಉಂಗುರ'ಗಳು) ಒದಗಿಸ'ತಕ್ಕದ್ದು ಮತ್ತು ಅವುಗಳ ಸ್ಥಾನಗಳನ್ನು ನಕ್ಷೆಯಲ್ಲಿ ಸ'ೂಚಿಸ'ತಕ್ಕದ್ದು. ಪ್ರತಿ 100.00ಚ.ಮೀ ಅಥವಾ ಅದರ' ಭಾಗದ ತಳ ಅಂತಸ್ತು ನೆಲ ವಿಸ್ತೀರ್ಣಕ್ಕೆ ಒಂದು ಅಗ್ನಿಶಾಮಕ ಉಪಕರ'ಣವನ್ನು ಅಳವಡಿಸ'ತಕ್ಕದ್ದು.

**18.10.** ತಳ ಅಂತಸ್ತಿನ ಗೋಡೆಗಳು ಮತ್ತು ನೆಲವು ನೀರ'ು ಹೀರ'ದಂತಿರ'ಬೇಕು ಮತ್ತು ಒಳ ಮಣ್ಣಿನ ನೀರಿನ ಮಟ್ಟದ ಜಲ ಸಾಮರ್ಥ್ಯದ ಒತ್ತಡವನ್ನು ಪೂರ್ಣವಾಗಿ ಪ್ರತಿ ಬಂಧಿಸುವ ರೀತಿಯಲ್ಲಿ ಯೋಜಿಸ'ತಕ್ಕದ್ದು.

**18.11.** ಗೋಡೆಗಳಲ್ಲಿ ತೇವವನ್ನು ತಡೆಗಟ್ಟಲು ಅವಶ್ಯಕ ಏರ್ಪಾಡುಗಳನ್ನು ಮಾಡತಕ್ಕದ್ದು.

**18.12.** ವಸ'ತಿ / ವಿದ್ಯಾ ಸ'ಂಸ್ಥೆ / ಸ'ಂಘ ಸ'ಂಸ್ಥೆ / ಅಪಾಯಕಾರಿ ಕಟ್ಟಡಗಳ ತಳ ಅಂತಸ್ತಿನ ಯಾವುದೇ ಪ್ರದೇಶವು ಹೊರ'ಗೆ ಹೋಗುವ ದ್ವಾರ'ದಿಂದ 11.25 ಮೀಟರ'್ಗಿಂತ, ವಾಣಿಜ್ಯ ಕಟ್ಟಡಗಳಿಗೆ 15.00 ಮೀಟರ'್ಗಿಂತ ಮತ್ತು ಕೈಗಾರಿಕೆ ಕಟ್ಟಡಗಳಿಗೆ 22.50 ಮೀಟರ'್ಗಿಂತ ಹೆಚ್ಚುದೂರ'ದಲ್ಲಿರ' ತಕ್ಕದಲ್ಲ.

**18.13.** ಐದು ಅಂತಸ್ತಿಗೂ ಹೆಚ್ಚಿರ'ುವ ಎಲ್ಲಾ ಕಟ್ಟಡಗಳಿಗೂ ವಾಹನ ನಿಲುಗಡೆ ಮತ್ತು ಕಟ್ಟಡದ ಸೇವೆ ಮತ್ತು ಬಳಕೆಯ ಉದ್ದೇಶಕ್ಕಾಗಿ ಬಳಸುವ ಯಂತ್ರಗಳ ಸ್ಥಾಪನೆಗಾಗಿ ಒಂದು ಅಧಿಕ ತಳ ಅಂತಸ್ತಿಗೆ ಅನುಮತಿ ನೀಡಬಹುದು. ಅಂತಹ ಕಟ್ಟಡಗಳಲ್ಲಿ ಗರಿಷ್ಠ ಎರ'ಡು ತಳ ಅಂತಸ'್ತುಗಳಿರ'ತಕ್ಕದ್ದು.

**18.14.** ಮೂರ'ು ನಕ್ಷತ್ರ ಚಿಹ್ನೆ ಮತ್ತು ಹೆಚ್ಚಿನ ಚಿಹ್ನೆ ಹೊಂದಿರ'ುವ ಹೋಟೆಲುಗಳಿಗೆ ವಾಹನ ನಿಲುಗಡೆ ಮತ್ತು ಕಟ್ಟಡದ ಸೇವೆ ಮತ್ತು ಬಳಕೆಯ ಉದ್ದೇಶಕ್ಕಾಗಿ ಬಳಸುವ ಯಂತ್ರಗಳ ಸ್ಥಾಪನೆಗಾಗಿ ಎರ'ಡು ಅಧಿಕ ತಳ ಅಂತಸ್ತಿಗೆ ಅನುಮತಿ ನೀಡಬಹುದು. ಅಂತಹ ಕಟ್ಟಡಗಳಲ್ಲಿ ಗರಿಷ್ಟ ಮೂರ'ು ತಳ ಅಂತಸ'್ತುಗಳಿರ'ತಕ್ಕದ್ದು.

**19.0. ಮೇಲುಪಾಯ:–**

**19.1.** ನೆಲ ಅಂತಸ್ತಿನ ಮಟ್ಟದಲ್ಲಿ ಮೇಲುಪಾಯದ ಎತ್ತರವು 0.45 ಮೀಟರ್‌ಗಿಂತಲೂ ಕಡಿಮೆ ಇರತಕ್ಕದಲ್ಲ ಮತ್ತು ತಳಅಂತಸ್ತಿನ ಎತ್ತರವು ಸರಾಸರಿ ನೆಲ ಮಟ್ಟಗಿಂತ 1.00 ಮೀಟರ್‌ಗಿಂತ ಹೆಚ್ಚಿರತಕ್ಕದ್ದಲ್ಲ. ಇಳಿಜಾರು ಬೀದಿಯ ಸಂದರ್ಭದಲ್ಲಿ ನಿವೇಶನ ಹೊಂದಿಕೊಂಡ ಮುಂಭಾಗದ ಕೇಂದ್ರ ಸ್ಥಳದ ಮಟ್ಟದಲ್ಲಿರುವ ಬೀದಿಗೆ ಸಂಬಂಧಿಸಿದಂತೆ ತೀರ್ಮಾನಿಸತಕ್ಕದ್ದು. ನಿವೇಶನದ ಮಟ್ಟವು ರಸ್ತೆಯ ಮಟ್ಟಕ್ಕಿಂತ ಭಿನ್ನವಾಗಿದ್ದಲ್ಲಿ ನಿವೇಶನದಿಂದ ಚರಂಡಿಯ ನೀರು ಸಾಕಷ್ಟು ಹೊರಗೆ ಹೋಗುವುದಾಗಿ ಧೃಢೀಪಡಿಸುವಂತೆ ಮೇಲುಪಾಯದ ಎತ್ತರವನ್ನು ಸುತ್ತುವರಿಯಲ್ಪಟ್ಟ ಸರಾಸರಿ ನೆಲ ಮಟ್ಟಕ್ಕೆ ಸಂಬಂಧಿಸಿದಂತೆ ನಿರ್ಧರಿಸತಕ್ಕದ್ದು.

**19.2.** ತಗ್ಗಾದ ಪ್ರದೇಶಗಳ ನಿವೇಶನದ ಪ್ರಕರಣಗಳಲ್ಲಿ ಒಳಚರಂಡಿ ವ್ಯವಸ್ಥೆಗಾಗಿ ಸಾಕಷ್ಟು ಇಳಿಜಾರನ್ನು ಒದಗಿಸಿ ಮತ್ತು ಕಟ್ಟಡದ ಒಳಗೆ ಮೇಲ್ಮೈ ಚರಂಡಿ ನೀರಿನ ಪ್ರವಾಹದಿಂದ ಉಂಟಾಗುವ ಅನಾಹುತವನ್ನು ತಡೆಗಟ್ಟಲು ಮೆಲುಪಾಯದ ಮಟ್ಟ ಅಳವಡಿಸತಕ್ಕದ್ದು.

**19.3.** ಮೇಲುಪಾಯಕ್ಕೆ ಪ್ರವೇಶ ಮಟ್ಟಿಲನ್ನು ಒದಗಿಸುವ ಸಂದರ್ಭದಲ್ಲಿ ನಿರ್ಮಾಣವು ನಿವೇಶನದ ಸರಹದ್ದಿನಲ್ಲಿರತಕ್ಕದ್ದು. ನಿವೇಶನದ ಸಾಮಾನ್ಯ ಮಟ್ಟವು ರಸ್ತೆಯ ಮಟ್ಟಕ್ಕಿಂತ ಹೆಚ್ಚಾಗಿರುವ ವಿಶೇಷ ಪ್ರಕರಣಗಳಲ್ಲಿ ನಿವೇಶನದಲ್ಲಿ ಕಟ್ಟಡದ ಸ್ಥಾನವನ್ನು ಮತ್ತು ನಿವೇಶನದ ಪರಿಮಿತಿಯಲ್ಲಿ ರಸ್ತೆಯಿಂದ ಪ್ರಸ್ತಾಪಿತ ಕಟ್ಟಡಕ್ಕೆ ಮೆಟ್ಟಿಲು ಅಥವಾ ರ್‍ಯಾಂಪ್‌ನ ಸ್ಥಾನವನ್ನು ನಿಗದಿಗೊಳಿಸತಕ್ಕ ಷರತ್ತುಗಳನ್ನು ಕಟ್ಟಡ ನಿರ್ಮಾಣ ಯೋಜನೆಗೆ ವಿಧಿಸಲು ಪ್ರಾಧಿಕಾರವು ಹಕ್ಕು ಹೊಂದಿರ ತಕ್ಕದ್ದು. ಅಂತಹ ಪ್ರವೇಶ ಮೆಟ್ಟಿಲಿನ ಮಾರ್ಗವು ಯಾವುದೇ ಅಡಚಣೆಯಿಂದ ಮುಕ್ತವಾಗಿರತಕ್ಕದ್ದು ಮತ್ತು ಆಕಾಶದವರೆಗೆ ಖಾಲಿ ಇರತಕ್ಕದ್ದು.

**20.0. ಕಟ್ಟಡ ಭಾಗಗಳ ಅಗತ್ಯಗಳು.**

**20.1. ವಾಸಯೋಗ್ಯ ಕೊಠಡಿಗಳು:–**

(i) ನಿವೇಶನದ ಅಳತೆ 120.00 ಚ.ಮೀ ವರೆವಿಗೆ ಯಾವುದೇ ವಾಸ ಯೋಗ್ಯ ಕೊಠಡಿಯು ಕನಿಷ್ಟ2.40 ಮೀಟರ್ ಅಗಲ ಹೊಂದಿರುವದರೊಂದಿಗೆ 8.0 ಚ.ಮೀ ಗಿಂತಲೂ ಕಡಿಮೆ ವಿಸ್ತೀರ್ಣ ಹೊಂದಿರ ತಕ್ಕುದಲ್ಲ.

(ii) ನೆಲದ ಮೇಲು ಮಟ್ಟದಿಂದ ಸೀಲಿಂಗ್(ಕೆಳಗಿನ ಚಪ್ಪಡಿ)ನ ಅಂತ್ಯಂತ ಕೆಳಗಿನ ಬಿಂದುವಿನವರೆವಿಗೆ ಮಾನವರ ವಾಸಕ್ಕಾಗಿ ಉಪಯೋಗಿಸುವ ಎಲ್ಲಾ ಕೊಠಡಿಗಳ ಎತ್ತರವು ಕನಿಷ್ಟ 2.75 ಮೀಟರ್ ಇರತಕ್ಕದ್ದು ಹವಾನಿಯಂತ್ರಿತ ಕೊಠಡಿಗಳ ವಿಷಯದಲ್ಲಿ ನೆಲದ ಮಟ್ಟದಿಂದ ಹವಾನಿಯಂತ್ರಿತ ಡಕ್ಟ್ ಅಥವಾ ಕೃತಕ ಸೀಲಿಂಗ್‌ನವರೆವಿಗೆ ಎತ್ತರವು 2.40 ಮೀಟರ್‌ಗೆ ಕಡಿಮೆ ಇಲ್ಲದಂತೆ ಇರತಕ್ಕದ್ದು, ತೊಲೆಗಳನ್ನು ಒದಗಿಸಿರುವ ಸಂಧರ್ಭಗಳಲ್ಲಿ ತೊಲೆಯವರೆಗಿನ ಕನಿಷ್ಟ ಎತ್ತರವು 2.40 ಮೀಟರ್ ಇರತಕ್ಕದ್ದು.

**20.2. ಅಡಿಗೆ ಮನೆ:–**

(i) ಊಟದ ಪ್ರದೇಶವನ್ನು ಪ್ರತ್ಯೇಕವಾಗಿ ಒದಗಿಸಿದಾಗ ಕನಿಷ್ಟ 1.80 ಮೀಟರ್ ಅಗಲ ಹೊಂದಿರುವುದರೊಂದಿಗೆ ಅಡಿಗೆ ಮನೆಯು 5.00 ಚ.ಮೀಗಿಂತಲೂ ಕಡಿಮೆ ಕ್ಷೇತ್ರ ಹೊಂದಿರ ತಕ್ಕದಲ್ಲ. ಉಗ್ರಾಣವು ಪ್ರತ್ಯೇಕವಾಗಿರುವಾಗ ಅಡುಗೆ ಮನೆಯ ವಿಸ್ತೀರ್ಣವನ್ನು 4.50 ಚ.ಮೀ ವರೆವಿಗೆ ಕಡಿಮೆ ಗೊಳಿಸಬಹುದು, ಊಟದ ವ್ಯವಸ್ಥೆಗೂ ಉದ್ದೇಶಿಸಲಾಗಿರುವ ಅಡುಗೆ ಮನೆಯು ಕನಿಷ್ಟ2.10 ಮೀಟರ್ ಅಗಲ ಹೊಂದಿರುವುದರೊಂದಿಗೆ 7.50 ಚ.ಮೀಗಿಂತಲೂ ಕಡಿಮೆ ನೆಲ ವಿಸ್ತೀರ್ಣ ಹೊಂದಿರ ತಕ್ಕುದಲ್ಲ.

(ii) ಅಡಿಗೆ ಮನೆಯ ಎತ್ತರವು 2.75 ಮೀಟರಿಗಿಂತ ಕಡಿಮೆ ಇರತಕ್ಕದಲ್ಲ. ತೊಲೆಗಳನ್ನು ಒದಗಿಸಿರುವ ಸಂದರ್ಭದಲ್ಲಿ ತೊಲೆಯವರೆಗಿನ ಕನಿಷ್ಟ ಎತ್ತರವು 2.40 ಮೀಟರ್ ಇರತಕ್ಕದ್ದು.

(iii) ಅಡಿಗೆ ಮನೆಯೆಂದು ಉಪಯೋಗಿಸಲಾಗುವ ಪ್ರತಿಯೊಂದು ಕೊಠಡಿಯು ಈ ಮುಂದಿನ ಸೌಕರ್ಯಗಳನ್ನು ಹೊಂದಿರತಕ್ಕದ್ದು, ಅವುಗಳು ಯಾವುದೆಂದರೆ;

(ಎ) ಭೋಜನ ಸಾಮಾಗ್ರಿಗಳಿಗಾಗಿ ಪ್ರತ್ಯೇಕ ಉಗ್ರಾಣವಿಲ್ಲದೆ ಇದ್ದಲ್ಲಿ, ಅಡಿಗೆ ಪಾತ್ರೆಗಳನ್ನು ತೊಳೆಯುವುದಕ್ಕಾಗಿ ಮೋರಿಯೊಂದಿಗೆ ಸಮರ್ಪಕವಾದ ಏರ್ಪಾಡು ಮಾಡತಕ್ಕದ್ದು.

(ಬಿ) ತೇವ ಇಂಗಲು ಅವಕಾಶ ಮಾಡಿ ಕೊಡದ ನೆಲ.

(ಸಿ) ಅನಿಲಗಳು ಹೊರ ಹೋಗಲು ಸಮರ್ಪಕವಾದ ಹೊಗೆಗಿಂಡಿ ಮತ್ತು ಹೊಗೆ ನಳಿಗೆಯ ವ್ಯವಸ್ಥೆಯನ್ನು ಹೊಂದಿರಬೇಕು.

**20.3. ಸ್ನಾನದ ಕೊಠಡಿ ಮತ್ತು ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರ:–**

(i) ಕನಿಷ್ಟ 1.20 ಮೀಟರ್ ಅಗಲ ಹೊಂದಿರುವುದರೊಂದಿಗೆ ಸ್ನಾನದ ಕೊಠಡಿಯ ಕನಿಷ್ಟ ವಿಸ್ತೀರ್ಣ 1.80 ಚ.ಮೀಗಿಂತಲೂ ಕಡಿಮೆ ಇರತಕ್ಕದ್ದಲ್ಲ. ಸ್ನಾನದ ಕೊಠಡಿ ಮತ್ತು ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರವು ಒಟ್ಟಿಗೆ ಇದ್ದಲ್ಲಿ ಕನಿಷ್ಟ 1.20 ಮೀಟರ್ ಅಗಲ ಹೊಂದಿರುವುದರೊಂದಿಗೆ ಅದರ ನೆಲ ವಿಸ್ತೀರ್ಣ 2.00 ಮೀಟರ್ ಕಡಿಮೆ ಇಲ್ಲದಂತೆ ಇರತಕ್ಕದ್ದು. ಕನಿಷ್ಟ ಅಗಲ 0.90 ಮೀಟರ್ ಹೊಂದಿರುವುದರೊಂದಿಗೆ ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರದ ಕನಿಷ್ಟ ನೆಲ ವಿಸ್ತೀರ್ಣ1.10 ಚ.ಮೀ ಇರತಕ್ಕದ್ದು.

(ii) ನೆಲದ ಮೇಲು ಮಟ್ಟದಿಂದ ಸೀಲಿಂಗ್‌ನ ಅತ್ಯಂತ ಕೆಳಗಿನ ಬಿಂದುವಿನವರೆವಿಗೆ ಅಳತೆ ಮಾಡಲಾದ ಸ್ನಾನದ ಕೊಠಡಿ ಅಥವಾ ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರದ ಎತ್ತರವು 2.20 ಮೀಟರ್‌ಗಿಂತ ಕಡಿಮೆ ಇರತಕ್ಕದ್ದಲ್ಲ.

(iii) ಸ್ನಾನದ ಕೊಠಡಿ ಮತ್ತು ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರಕ್ಕಾಗಿ ಉಪಯೋಗಿಸುವ ಪ್ರತಿ ಕೊಠಡಿಯೂ;

(ಎ) ಕಡೆಯ ಪಕ್ಷ ಅದರ ಒಂದು ಗೋಡೆಯಾದರೂ ಹೊರಗಾಳಿಗೆ ತೆರೆದ ಕಿಂಡಿಯನ್ನು ಹೊಂದಿರುವಂತೆ ನೆಲೆಸಿರತಕ್ಕದ್ದು.

(ಬಿ) ನೀರು ಪ್ರವೇಶಿಸದ ಹಾಗೂ ಹೀರದಂತಹ ವಸ್ತುಗಳಿಂದ ನಿರ್ಮಿತವಾದ ಕಟ್ಟೆ ಅಥವಾ ಆಸನವನ್ನು ಹೊಂದಿರಬೇಕು.

(ಸಿ) ಗೋಡೆಗಳು ಅಥವಾ ವಿಭಾಗಗಳಿಂದ ಆವೃತಗೊಳಿಸಲ್ಪಟ್ಟಿರ ಬೇಕು ಮತ್ತು ಅಂತಹ ಕೊಠಡಿಯ ನೆಲದ ಮೇಲೆ ಒಂದು ಮೀಟರ್ ಎತ್ತರಕ್ಕಿಂತ ಕಡಿಮೆ ಇಲ್ಲದಂತೆ ಅಂತಹ ಪ್ರತಿ ಗೋಡೆ ಅಥವಾ ವಿಭಾಗವನ್ನು ನುಣುಪಾದ ಅಭೇಧ್ಯ ಸಾಮಾಗ್ರಿಯಿಂದ ಸಜ್ಜುಗೊಳಿಸಲ್ಪಡತಕ್ಕದ್ದು.

(ಡಿ) (i) ವರಂಡಾ ಅಥವಾ ಇತರ ಕೊಠಡಿಗಳ ಕಡೆಗಲ್ಲದೆ ಮೋರಿಯ ಕಡೆಗೆ ಸೂಕ್ತ ಪ್ರಮಾಣದ ಇಳಿಜಾರು ಹೊಂದಿರುವ ಅಭೇಧ್ಯ ನೆಲದ ಹೊದಿಕೆಯಿಂದ ಅಳವಡಿಸಲ್ಪಟ್ಟಿರಬೇಕು.

(ii) ಬಚ್ಚಲು ಮನೆಯ ಹೊರತು ಇತರ ಯಾವುದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದಲ್ಲಿ ಮತ್ತು ಅಂತಹ ಯಾವುದೇ ಕೊಠಡಿಯು ಅಡಿಗೆ ಮನೆ ಅಥವಾ ಅಡಿಗೆ ಮಾಡುವ ಸ್ಥಳಕ್ಕೆ ಬಾಗಿಲು, ಕಿಟಕಿ ಅಥವಾ ಇತರ ಕಿಂಡಿಗಳ ಮೂಲಕ ನೇರವಾಗಿ ತೆರದಿರತಕ್ಕದ್ದಲ್ಲ. ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರದ ಪ್ರತಿ ಕೊಠಡಿಯೂ ಅದರ ಪ್ರವೇಶ ಮಾರ್ಗವನ್ನು ಪೂರ್ಣವಾಗಿ ಮುಚ್ಚ ಬಹುದಾದಂತಹ ಬಾಗಿಲನ್ನು ಹೊಂದಿರತಕ್ಕದ್ದು.

(ಇ) ರಭಸವಾಗಿ ನೀರು ಹೊರ ಹೋಗುವ ಸೌಲಭ್ಯ ಹೊಂದಿರ ತಕ್ಕದ್ದು.

**20.4. ಮೆಜ್ಜನೈನ್ ಅಂತಸ್ತು:–**

(i) ಒಂದು ಕಟ್ಟಡದಲ್ಲಿ ಒಂದಕ್ಕಿಂತ ಹೆಚ್ಚು ಮೆಜ್ಜನೈನ್ ಅಂತಸ್ತನ್ನು ಅನುಮತಿಸ ತಕ್ಕದಲ್ಲ.

(ii) ಮೆಜ್ಜನೈನ್ ಅಂತಸ್ತು ಅದರ ಕೆಳ ಅಂತಸ್ತಿನಿಂದ ಮಾತ್ರ ಪ್ರವೇಶ ಹೊಂದಿರತಕ್ಕದ್ದು.

(iii) ವಾಸದ ಕೊಠಡಿಯಾಗಿ ಉಪಯೋಗಿಸಿದಲ್ಲಿ ಮೆಜ್ಜನೈನ್ ಅಂತಸ್ತಿನ ಕನಿಷ್ಟ ವಿಸ್ತೀರ್ಣವು 9.50 ಚ.ಮೀ ಇರತಕ್ಕದ್ದು. ಮೆಜ್ಜನೈನ್ ಅಂತಸ್ತಿನ ಒಟ್ಟು ವಿಸ್ತೀರ್ಣವು ಅದರ ಕೆಳ ಅಂತಸ್ತಿನ ವಿಸ್ತೀರ್ಣದ ಮೂರನೇ ಒಂದು ಭಾಗ (ಅಥವಾ ಶೇಕಡ 33.33)ಕ್ಕಿಂತಲೂ ಹೆಚ್ಚು ಇರತಕ್ಕದಲ್ಲ.

(iv) ಮೆಜ್ಜನೈನ್ ಅಂತಸ್ತಿನ ಕನಿಷ್ಟ ಎತ್ತರ 2.20 ಮೀಟರ್ ಇರತಕ್ಕದ್ದು.

(v) ಮೆಜ್ಜನೈನ್ ಅಂತಸ್ತನ್ನು ಒಂದು ಕೊಠಡಿ ಅಥವಾ ಒಂದು ಅಂಕಣದ ಮೇಲೆ ಅನುಮತಿಸತಕ್ಕದ್ದು.

(vi) ಬೆಳಕು ಮತ್ತು ಗಾಳಿಯ ವ್ಯವಸ್ಥೆಯ ಬಗ್ಗೆ ಮೆಜ್ಜನೈನ್ ಅಂತಸ್ತು ವಾಸಿಸುವ ಕೊಠಡಿಯ ಪ್ರಮಾಣವನ್ನು ಅನುಸರಿಸತಕ್ಕದ್ದು.

(vii) ಮೆಜ್ಜನೈನ್ ಅಂತಸ್ತನ್ನು ಅದರ ಮೇಲಿನ ಅಥವಾ ಕೆಳಗಿನ ಸ್ಥಳದ ಮುಕ್ತ ಬೆಳಕು ಮತ್ತು ವಾಯುಸಂಚಾರದ ವ್ಯವಸ್ಥೆಗೆ ಅಡ್ಡಿಯಾಗದಂತೆ ನಿರ್ಮಿಸ ತಕ್ಕದ್ದು.

(viii) ಸಾಕಷ್ಟು ಪ್ರಮಾಣದ ಮುಕ್ತ ಬೆಳಕು ಮತ್ತು ವಾಯುಸಂಚಾರದ ವ್ಯವಸ್ಥೆಯನ್ನು ಒದಗಿಸದೇ ಇದ್ದಲ್ಲಿ ಮೆಜ್ಜನೈನ್ ಅಂತಸ್ತನ್ನು ಸಣ್ಣ ಅಂಕಣಗಳನ್ನಾಗಿ ವಿಭಾಗ ಮಾಡ ತಕ್ಕುದಲ್ಲ.

(ix) ಮೆಜ್ಜನೈನ್ ಅಂತಸ್ತನ್ನು ಅಥವಾ ಅದರ ಯಾವುದೇ ಭಾಗವನ್ನು ಅಡುಗೆ ಮನೆಯನ್ನಾಗಿ ಉಪಯೋಗಿಸತಕ್ಕುದಲ್ಲ.

(x) ಯಾವುದೇ ಸಂದರ್ಭದಲ್ಲಿ ಮೆಜ್ಜನೈನ್ ಅಂತಸ್ತನ್ನು ಮುಕ್ತ ಬೆಳಕು ಮತ್ತು ವಾಯುಸಂಚಾರವಿಲ್ಲದ ಅಂಕಣಗಳಾಗಿ ಪರಿವರ್ತನೆಗೊಳ್ಳಲು ಭಾಧ್ಯ ಮಡುವ ರೀತಿಯಲ್ಲಿ ಮುಚ್ಚತಕ್ಕದ್ದಲ್ಲ.

**20.5. ಅಟ್ಟ:–**

(i) ಅಡಿಗೆ ಮನೆಯಲ್ಲಿ ಅಳವಡಿಸಲಾದ ಒಂದು ಅಟ್ಟವು ಅಡಿಗೆ ಮನೆಯ ನೆಲದ ಕ್ಷೇತ್ರದ ಶೇಕಡ 25 ರಷ್ಟನ್ನು ಮೀರತಕ್ಕದಲ್ಲ ಮತ್ತು ಸ್ನಾನದ ಕೊಠಡಿ, ಶೌಚಾಗಾರ ಮತ್ತು ಮೊಗಸಾಲೆಯ ಮೇಲೆ ಒದಗಿಸಿದಾಗ ಅಟ್ಟವು ಶೇಕಡ 100ರ ವರೆವಿಗೆ ಕ್ಷೇತ್ರವನ್ನು ವ್ಯಾಪಿಸಬಹುದು.

(ii) ಅಟ್ಟದಲ್ಲಿ ತಲೆಗೆ ತಾಕಬಹುದಾದ ಎತ್ತರವು 1.50 ಮೀಟರ್ ಗಿಂತಲೂ ಹೆಚ್ಚಿರ ತಕ್ಕದಲ್ಲ.

**20.6. ಮೆಟ್ಟಿಲುಗಳು:–**

(i) ಕಟ್ಟಡಗಳ ಮೆಟ್ಟಿಲುಗಳ ಕನಿಷ್ಟ ಅಗಲ, ತುಳಿತದ ಕನಿಷ್ಟ ಅಗಲ ಮತ್ತು ತುಳಿತದ ಗರಿಷ್ಟ ಎತ್ತರಗಳು ಈ ಕೆಳಗೆ ನೀಡಿರುವಂತೆ ಇರತಕ್ಕದ್ದು.

ಮೆಟ್ಟಿಲುಗಳ ಕನಿಷ್ಟ ಅಗಲವು ಈ ಮುಂದಿನಂತೆ ಇರತಕ್ಕದ್ದು

| | | |
|---|---|---|
| ಎ) | ವಾಸದ ಕಟ್ಟಡಗಳು (ನಿವಾಸಗಳು) | 1.00 ಮೀಟರ್ |
| | ಸೂಚನೆ: ಎರಡು ಅಂತಸ್ತುಗಳ ಸಾಲುಮನೆಗಳುಗೆ ಕನಿಷ್ಟ ಅಗಲ 0.75 ಮೀಟರ್ ಇರತಕ್ಕದ್ದು. | |
| ಬಿ) | ವಿದ್ಯಾರ್ಥಿ ನಿಲಯಗಳನ್ನೊಳಗೊಂಡ ವಾಸದ ಕಟ್ಟಡಗಳು | 1.50 ಮೀಟರ್ |
| ಸಿ) | ಆಡಿಟೋರಿಯಂ, ಥಿಯೇಟರ್ ಮತ್ತು ಚಿತ್ರಮಂದಿರಗಳಂತಹ ಸಭಾ ಭವನದ ಕಟ್ಟಡ | 1.50 ಮೀಟರ್ |
| ಡಿ) | 24.00 ಮೀಟರ್ ಎತ್ತರದವರೆಗಿನ ಶೈಕ್ಷಣಿಕ ಕಟ್ಟಡ | 1.50 ಮೀಟರ್ |
| ಇ) | 24.00 ಮೀಟರ್ ಗಿಂತಲೂ ಹೆಚ್ಚು ಎತ್ತರದ ಶೈಕ್ಷಣಿಕ ಕಟ್ಟಡ | 2.00 ಮೀಟರ್ |
| ಎಫ್) | 10 ಹಾಸಿಗೆಗಳ ವರೆಗಿನ ಸಂಸ್ಥಾ ಕಟ್ಟಡಗಳು | 1.50 ಮೀಟರ್ |
| ಜಿ) | 10 ಹಾಸಿಗೆಗಳಿಗಿಂತಲೂ ಹೆಚ್ಚಿನ ಸಂಸ್ಥಾ ಕಟ್ಟಡಗಳು | 2.00 ಮೀಟರ್ |
| ಹೆಚ್) | ಇತರ ಎಲ್ಲಾ ಕಟ್ಟಡಗಳು | 1.50 ಮೀಟರ್ |

ವಾಸದ ಕಟ್ಟಡಗಳಲ್ಲಿ ನೋಸಿಂಗ್‌ನ್ನು ಹೊರತುಪಡಿಸಿ ತುಳಿತದ ಕನಿಷ್ಟ ಅಗಲವು 25 ಸೆಂಟಿ ಮೀಟರ್ ಇರತಕ್ಕದ್ದು ಇತರ ಕಟ್ಟಡಗಳಲ್ಲಿ ತುಳಿತದ ಕನಿಷ್ಟ ಅಗಲವು 30ಸೆಂಟಿ ಮೀಟರ್ ಇರತಕ್ಕದ್ದು.

ವಾಸದ ಕಟ್ಟಡಗಳಲ್ಲಿ ತುಳಿತದ ಗರಿಷ್ಟ ಎತ್ತರ 19.00 ಸೆಂಟಿಮೀಟರ್ ಇರತಕ್ಕದ್ದು, ಇತರ ಕಟ್ಟಡಗಳಲ್ಲಿ 15.00 ಸೆಂಟಿಮೀಟರ್ ಇರತಕ್ಕದ್ದು ಹಾಗೂ ಪ್ರತಿ ಹಂತದಲ್ಲಿನ ಸಂಖ್ಯೆಯನ್ನು 15ಕ್ಕೆ ಮಿತಿಗೊಳಿಸತಕ್ಕದ್ದು.

(ii) ಮೆಟ್ಟಲಿನಲ್ಲಿ ತಲೆಗೆ ತಾಕ ಬಹುದಾದ ಕನಿಷ್ಟ ಸ್ಪಷ್ಟ ಎತ್ತರವು 2.20 ಮೀಟರ್ ಇರತಕ್ಕದ್ದು.

**20.7. ಲಿಫ್ಟ್‌ಗಳು:–**

ರಾಷ್ಟ್ರೀಯ ಕಟ್ಟಡದ ಸಂಹಿತೆಯ ಭಾಗ–VIII. ರ 5ನೇ ಪ್ರಕರಣದನ್ವಯ ಲಿಫ್ಟ್‌ಗಳಿಗೆ ಸಂಬಂಧ ಪಟ್ಟ ವಿನ್ಯಾಸ ಮತ್ತು ಯೋಜನೆಯನ್ನು ಅನುಸರಿಸಿ, 15.00 ಮೀಟರ್ ಮತ್ತು ಅದಕ್ಕಿಂತ ಹೆಚ್ಚು ಎತ್ತರದ ಅಥವಾ ನೆಲ ಅಂತಸ್ತಿನೊಂದಿಗೆ ಮೂರು ಅಂತಸ್ತುಗಳಿಗಿಂತಲೂ ಹೆಚ್ಚಿನ ಅಂತಸ್ತುಗಳ ಎಲ್ಲಾ ಕಟ್ಟಡಗಳಲ್ಲಿ ಲಿಫ್ಟ್‌ಗಳ ವ್ಯವಸ್ಥೆಯನ್ನು ಮಾಡತಕ್ಕದ್ದು. ಲಿಫ್ಟ್‌ಗಳನ್ನು ತುತ್ತತುದಿಯ ಅಂತಸ್ತಿನಲ್ಲಿ ಕೊನೆಗಾಣಿಸತಕ್ಕದ್ದು.

**20.8. ಆವರಣಗೋಡೆ:–**

(ಎ) ಪ್ರಾಧಿಕಾರದ ವಿಶೇಷ ಅನುಮತಿಯ ಹೊರತು;

(i) ಮುಂಭಾಗ ಮತ್ತು ಪಾರ್ಶ್ವಗಳ ಆವರಣ ಗೋಡೆಗಳ ಗರಿಷ್ಠ ಎತ್ತರವು ಜಮೀನಿನ ಮಟ್ಟದ ಮೇಲೆ 1.50ಮೀಟರ್ ಇರತಕ್ಕದ್ದು.

(ii) ಹಿಂಭಾಗದ ಆವರಣ ಗೋಡೆಯು ಸರ್ವೀಸ್‌ರಸ್ತೆಯ ಮಧ್ಯರೇಖೆಯ ಮಟ್ಟದ ಮೇಲೆ 2.00ಮೀಟರ್‌ಗಿಂತಲೂ ಅಥವಾ ಈ ಸರ್ವೀಸ್‌ರಸ್ತೆ ಇಲ್ಲದ ಸಂದರ್ಭದಲ್ಲಿ ಜಮೀನಿನ ಮಟ್ಟದ ಮೇಲೆ 2.00ಮೀಟರ್ ಗಿಂತಲೂ ಹೆಚ್ಚು ಎತ್ತರ ಹೊಂದಿರತಕ್ಕದ್ದಲ್ಲ.

(iii) ಮೂಲೆ ನಿವೇಶನಗಳ ವಿಷಯದಲ್ಲಿ ಸಂಧಿಸುವ ಬಿಂದುವಿನಿಂದ ಎರಡೂ ಕಡೆಗಳಲ್ಲಿ 5.00 ಮೀಟರ್ ದೂರದವರೆವಿಗೆ ಆವರಣ ಗೋಡೆಯ ಎತ್ತರವನ್ನು 0.75ಮೀಟರ್ ವರೆವಿಗೆ ಮಿತಿಗೊಳಿಸತಕ್ಕದ್ದು. ಇಂತಹ ಪ್ರಕರಣಗಳಲ್ಲಿ ಉಪವಿಧಿ 17.0 ರಲ್ಲಿ ಸೂಚಿಸಿರುವಂತೆ ಆವರಣಗೋಡೆಗಳ ಮೂಲೆಗಳನ್ನು ವೃತ್ತಕಾರ ಮಾಡತಕ್ಕದ್ದು ಅಥವಾ ಕತ್ತರಿಸತಕ್ಕದ್ದು.

(ಬಿ) ಉಪವಿಧಿ 20.8ರ ಉಪವಾಕ್ಯ (ಎ) ರಲ್ಲಿನ ಗೊತ್ತುವಳಿಗಳು ಬಂಧೀಖಾನೆಗಳು, ಸ್ಯಾನಿಟೋರಿಯಂಗಳು, ಭಾರಿ ಕೈಗಾರಿಕೆಗಳು ಮತ್ತು ಮಹಿಳಾ ವಿದ್ಯಾರ್ಥಿ ನಿಲಯಗಳ ಆವರಣಗೋಡೆಗಳಿಗೆ ಅನ್ವಯಿಸುವುದಿಲ್ಲ.

(ಸಿ) ಕಟ್ಟಡ ನಿವೇಶನಗಳ ಸರಹದ್ದುಗಳಿಗೆ ಮುಳ್ಳುತಂತಿಬೇಲಿ, ಪಾಪಸ್ಸುಕಳ್ಳಿ ಬೇಲಿ ಅಥವಾ ಇತರ ಆಕ್ಷೇಪಣೀಯ ಸಸ್ಯಗಳ ಬೇಲಿಗಳನ್ನು ಹಾಕುವ ವ್ಯವಸ್ಥೆ ಮಾಡಕೂಡದು.

**20.9. ಕೈಗಾರಿಕಾ ಕಟ್ಟಡಗಳು:–**

ಫ್ಯಾಕ್ಟರಿ ಅಧಿನಿಯಮ, 1948 ಮತ್ತು ಅದರ ನಿಯಮಗಳ ಅಡಿಯಲ್ಲಿ ಕೊಠಡಿಗಳ ಕನಿಷ್ಟ ಎತ್ತರವನ್ನು ನಿಗದಿ ಪಡಿಸತಕ್ಕದ್ದು.

**20.10. ಕಲುಷಿತಗೊಂಡ ಮತ್ತು ಕಲುಷಿತಗೊಳ್ಳದ ನೀರನ್ನು ಹೊರದೂಡುವುದು.:–**

(ಎ) ಕಟ್ಟಡಗಳಿಂದ ಕಲುಷಿತಗೊಂಡ ಮತ್ತು ಕಲುಷಿತಗೊಳ್ಳದ ನೀರನ್ನು ಪ್ರತ್ಯೇಕವಾಗಿ ವಿಲೇವಾರಿ ಮಾಡಲು ಪ್ರತ್ಯೇಕವಾದ ಮೋರಿಗಳ ವ್ಯವಸ್ಥೆಗಳನ್ನು ಮಾಡತಕ್ಕದ್ದು, ಗೃಹಕೃತ್ಯ ಅಥವಾ ಇತರ ಉದ್ದೇಶಗಳಿಗಾಗಿ ಈಗಾಗಲೇ ಉಪಯೋಗಿಸಿದ್ದು ಬಚ್ಚಲು ಮನೆಗಳು, ಸ್ನಾನದ ಕೊಠಡಿಗಳು, ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರಗಳು, ಅಡಿಗೆ ಮನೆ ಮತ್ತು ಕಟ್ಟಡದ ಇತರ ಭಾಗಗಳಿಂದ ಹೊರಗೆ ಬರುವ ನೀರನ್ನು ಕಲುಷಿತಗೊಂಡ ನೀರೆಂದು ಪರಿಗಣಿಸ ತಕ್ಕದ್ದು, ಮಳೆನೀರನ್ನು ಮತ್ತು ಒಳಮಣ್ಣಿನಿಂದ ಬರುವ ಕಲುಷಿತಗೊಳ್ಳದ ನೀರು ಇದ್ದಲ್ಲಿ ಅಂತಹ ನೀರನ್ನು ಕಲುಷಿತಗೊಳ್ಳದ ನೀರಿನಲ್ಲಿ ಸೇರಿಸತಕ್ಕದ್ದು.

(ಬಿ) ಕಟ್ಟಡದ ಅಥವಾ ಪಕ್ಕದ ಕಟ್ಟಡದ ಗೋಡೆಯ ಅಥವಾ ಅಡಿಪಾಯದ ಯಾವುದೋ ಭಾಗದಲ್ಲಿ ತೇವವನ್ನುಂಟುವಾಡದ ರೀತಿಯಲ್ಲಿ ಅಥವಾ ಅಕ್ಕ ಪಕ್ಕದವರಿಗೆ ಅಥವಾ ದಾರಿಹೋಕರಿಗೆ ತೊಂದರೆ ಅಥವಾ ಅನಾನುಕೂಲವಾಗದ ರೀತಿಯಲ್ಲಿ ಸರಿಯಾಗಿ ರಚಿಸಿ, ಜೋಡಿಸಿ ಮತ್ತು ಸ್ಥಿರಪಡಿಸಿರುವ ಸೂಕ್ತ ಅಳತೆಯ ಸಾಕಷ್ಟು ಮಳೆನೀರಿನ ಕೋಳವೆಗಳ ಮೂಲಕ ಮಳೆನೀರನ್ನು ಹೊರಗೆ ಸಾಗಿಸಲು ಅವಕಾಶ ಮಾಡಿಕೊಡುವಂತೆ ಪ್ರತಿ ಕಟ್ಟಡದ ಛಾವಣಿಯನ್ನು ನಿರ್ಮಿಸತಕ್ಕದ್ದು.

(ಸಿ) ಉಪವಿಧಿ 32 ಕ್ಕೆ ಒಳಪಟ್ಟಂತೆ, ಮಳೆ ನೀರಿನಕೊಳವೆಯನ್ನು ರಸ್ತೆಬದಿಯ ಚರಂಡಿಗೆ ಜೋಡಿಸತಕ್ಕದ್ದು, ಅಥವಾ ಮಹಾನಗರ ಪಾಲಿಕೆಯ ಆಸ್ತಿಗೆ ಧಕ್ಕೆಯಾಗದಂತೆ ಇತರ ಯಾವುದೇ ಅನುಮೋದಿಸಿದ ರಿತಿಯಲ್ಲಿ ಸಾಗಿಸಬಹುದು.

(ಡಿ) ಉಪವಿಧಿ 32ಕ್ಕೆ ಒಳಪಟ್ಟಂತೆ, ಮಳೆ ನೀರಿನ ಕೊಳವೆಗಳನ್ನು ಕಟ್ಟಡದ ಬಾಹ್ಯ ಗೋಡೆಗಳ ಹೊರಭಾಗದಲ್ಲಿ ಕೂಡಿಸಬಹುದು ಅಥವಾ ಅಂತಹ ಬಾಹ್ಯ ಗೊಡೆಗಳಲ್ಲಿ ಕತ್ತರಿಸಿದ ಅಥವಾ ತಯಾರಿಸಿದ ಗೂಡುಗಳಲ್ಲಿ ಅಥವಾ ಕೊರೆತಗಳಲ್ಲಿ ಅಥವಾ ಪ್ರಾಧಿಕಾರವು ಅನುಮೋದಿಸಿದ ಇತರ ಯಾವುದೇ ರೀತಿಯಲ್ಲಿ ಕೂಡಿಸತಕ್ಕದ್ದು.

**ಬೆಳಕು ಮತ್ತು ವಾಯು ಸಂಚಾರದ ಅಗತ್ಯಗಳು:–**

(i) **ಸ್ವಾಭಾವಿಕ ವಾಯು ಸಂಚಾರದ ವ್ಯವಸ್ಥೆ:–** ಕೊಠಡಿಗಳಲ್ಲಿ ಬೆಳಕು ಮತ್ತು ಗಾಳಿಗೆ ಪ್ರವೇಶವಿರುವಂತೆ ಹೊರಗಾಳಿ ಅಥವಾ ಹೊರಚಾಚಿದ ವರಂಡಾಕ್ಕೆ ತೆರೆದಿರುವ ಕಿಟಕಿ ಮತ್ತು ವೆಂಟಿಲೇಟರ್‌ಗಳಂತಹ ಒಂದು ಅಥವಾ ಹೆಂಚಿನ ಕಿಂಡಿಗಳನ್ನು ಅಳವಡಿಸ ತಕ್ಕದ್ದು. ಗೋಡೆಗಳಲ್ಲಿ ಅಳವಡಿಸಿರುವ ಬಾಗಿಲುಗಳನ್ನು ಬೆಳಕು ಮತ್ತು ಗಾಳಿಯ ಉದ್ದೇಶಕ್ಕಾಗಿ ತೆರೆದ ಕಿಂಡಿಗಳ ಪ್ರದೇಶದ ಲೆಕ್ಕಕ್ಕೆ ಪರಿಗಣಿಸುವುದಿಲ್ಲ.

(ii) **ಕೃತಕ ವಾಯುಸಂಚಾರದ ವ್ಯವಸ್ಥೆ:–** ಸೂರ್ಯನ ಬೆಳಕುಮತ್ತು ಸ್ವಾಭಾವಿಕ ವಾಯು ಸಂಚಾರದ ಅಗತ್ಯಗಳನ್ನು ಪೂರೈಸಲು ವ್ಯವಸ್ಥೆಯಾಗದಿರುವಲ್ಲಿ ಇಂಡಿಯನ್ ಸ್ಟಾಂಡರ್ಡ್ ಸಂಸ್ಥೆಯಿಂದ ಹೊರಹೊಮ್ಮಿರುವ ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ VIII. ಬಿಲ್ಡಿಂಗ್ ಸರ್ವಿಸ್ ಪ್ರಕರಣ–I. ಲೈಟಿಂಗ್ ಅಂಡ್ ವೆಂಟಿಲೇಷನ್ ಇದರ ಪ್ರಕಾರ ಕೃತಕ ಬೆಳಕು ಮತ್ತು ಯಾಂತ್ರಿಕ ವಾಯುಸಂಚಾರ ವ್ಯವಸ್ಥೆಯನ್ನು ಒದಗಿಸಲು ನಿಶ್ಚಿತ ಕ್ರಮ ಕೈಗೊಳ್ಳತಕ್ಕದ್ದು.

(iii) **ಬೆಳಕು ಕಿಂಡಿಗಳ ಕ್ಷೇತ್ರ ;**

(ಎ) ವಾಸದ ಕಟ್ಟಡಗಳಲ್ಲಿ ಬಾಗಿಲುಗಳನ್ನು ಹೊರತುಪಡಿಸಿ ತೆರೆದ ಕಿಂಡಿಗಳ ಕನಿಷ್ಟ ಕ್ಷೇತ್ರವು ಅಂತಸ್ತು ನೆಲ ವಿಸ್ತೀರ್ಣದ ಆರನೇ ಒಂದು ಭಾಗಕ್ಕಿಂತಲೂ ಕಡಿಮೆ ಇರತಕ್ಕದಲ್ಲ. ವ್ಯಾಪಾರಿ ಮಳಿಗೆಗಳು, ಶೈಕ್ಷಣಿಕ ಕಟ್ಟಡಗಳು, ಕಛೇರಿಗಳು, ಸಂಸ್ಥೆಗಳು ಮತ್ತು ಆಸ್ಪತ್ರೆ ಕಟ್ಟಡಗಳು ಮೊದಲಾದ ಇತರ ಸಾರ್ವಜನಿಕ ಕಟ್ಟಡಗಳಲ್ಲಿ ತೆರೆದ ಕಿಂಡಿಗಳ ಕನಿಷ್ಟ ಕ್ಷೇತ್ರವು ಅಂತಸ್ತು ನೆಲ ವಿಸ್ತೀರ್ಣದ ಐದನೇ ಒಂದು ಭಾಗಕ್ಕಿಂತಲೂ ಕಡಿಮೆ ಇರತಕ್ಕದಲ್ಲ. ಅಡಿಗೆ ಮನೆಗಳಿಗೆಗಾಗಿ ತೆರೆದ

ಕಿಂಡಿಗಳ ಕ್ಷೇತ್ರವನ್ನು ಶೇಕಡ 25 ರಷ್ಟು ಹೆಚ್ಚಿಸತಕ್ಕದ್ದು ತೆರೆದ ಕಿಂಡಿಯಿಂದ 7.50 ಮೀಟರ್‌ಗಿಂತಲೂ ದೂರವಿರುವ ಕೊಠಡಿಯ ಯಾವುದೇ ಭಾಗಕ್ಕೆ ಬೆಳಕಿನ ವ್ಯವಸ್ಥೆ ಇರುವುದಾಗಿ ಭಾವಿಸತಕ್ಕದ್ದಲ್ಲ.

(ಬಿ) ಸ್ನಾನದ ಕೊಠಡಿ ಮತ್ತು ಹರಿಯುವ ನೀರಿನ ವ್ಯವಸ್ಥೆಯುಳ್ಳ ಶೌಚಾಗಾರದಲ್ಲಿ ಕಿಟಕಿ ಅಥವಾ ವೆಂಟಿಲೇಟರಿನ ಕ್ಷೇತ್ರವು ಒಂದು ಭಾಗದ ಅಳತೆ 0.30ಮೀಟರ್‌ಗೆ ಕಡಿಮೆಯಿಲ್ಲದಂತೆ ಕನಿಷ್ಟ 0.90 ಚ.ಮೀ ಇರತಕ್ಕದ್ದು.

(iv) **ಗಾಳಿ ಮತ್ತು ಬೆಳಕು ವ್ಯವಸ್ಥೆಯ ರಂಧ್ರ :–**

ಶೌಚಗಾರಗಳು ಮತ್ತು ಸ್ನಾನದ ಕೊಠಡಿಗಳಲ್ಲಿ ಬಯಲು ಜಾಗಗಳ ಕಡೆಗೆ ಯಾವುದೇ ತೆರೆದ ಕಿಂಡಿಯನ್ನು ಅಳವಡಿಸದೇ ಇರುವ ಸಂದರ್ಭದಲ್ಲಿ, ಅವುಗಳು ಗಾಳಿ ಮತ್ತು ಬೆಳಕು ವ್ಯವಸ್ಥೆಯ ರಂಧ್ರಗಳ ಕಡೆಗೆ ತೆರೆಯುವಂತಿರತಕ್ಕದ್ದು. ಅಂತಹ ರಂಧ್ರದ ಅಳತೆಯ ಮುಂದೆ ಸೂಚಿಸಿರುವುದಕ್ಕಿಂತಲೂ ಕಡಿಮೆ ಇರತಕ್ಕದಲ್ಲ.

| ಅಂತಸ್ತುಗಳು | ಗಾಳಿ ಮತ್ತು ಬೆಳಕು ವ್ಯವಸ್ಥೆಯ ರಂಧ್ರದ ಅಳತೆ ಚ.ಮೀಗಳಲ್ಲಿ | ಕನಿಷ್ಟ ಅಗಲ ಮೀಟರ್‌ಗಳಲ್ಲಿ |
|---|---|---|
| 2 ಸಂಖ್ಯೆಗಳ ವರೆವಿಗೆ | 1.20 ಚ.ಮೀ | 0.90 ಮೀಟರ್ |
| 4 ಸಂಖ್ಯೆಗಳ ವರೆವಿಗೆ | 1.80 ಚ.ಮೀ | 1.20 ಮೀಟರ್ |
| 6 ಸಂಖ್ಯೆಗಳ ವರೆವಿಗೆ | 4.00 ಚ.ಮೀ | 1.50 ಮೀಟರ್ |
| 8 ಸಂಖ್ಯೆಗಳ ವರೆವಿಗೆ | 5.40 ಚ.ಮೀ | 1.80 ಮೀಟರ್ |
| 10 ಸಂಖ್ಯೆಗಳ ವರೆವಿಗೆ | 8.00 ಚ.ಮೀ | 2.40 ಮೀಟರ್ |
| 11 ಸಂಖ್ಯೆಗಳು ಮತ್ತು ಅಧಿಕ | 9.00 ಚ.ಮೀ | 3.00 ಮೀಟರ್ |

**21.0. ಎತ್ತರಿಸಿದ ಕಟ್ಟಡಗಳು, ಸಾರ್ವಜನಿಕ ಮತ್ತು ಕೈಗಾರಿಕಾ ಕಟ್ಟಡಗಳ ನಿರ್ಗಮನ ಮಾರ್ಗಗಳ ಅವಶ್ಯಕತೆಗಳು.**

**21.1. ಸಾಮಾನ್ಯ :–**

**21.1.1.** ಮಾನವರ ಅಧಿಭೋಗಕ್ಕಾಗಿ ಉದ್ದೇಶಿಸಲ್ಪಟ್ಟ ಪ್ರತಿ ಕಟ್ಟಡದಲ್ಲಿಯೂ, ಅಗ್ನಿದುರಂತ ಅಥವಾ ಇತರ ತುರ್ತು ಪರಿಸ್ಥಿತಿಯಲ್ಲಿ ಅದಿಭೋಗದಾರರು ಸುರಕ್ಷಿತವಾಗಿ ಪರಾಗಲು ಅವಕಾಶ ಮಾಡಿಕೊಡಲು ಸಾಮಾರ್ಥ್ಯ ಹೊಂದಿರುವ ನಿರ್ಗಮನ ಮಾರ್ಗಗಳನ್ನು ಅಳವಡಿಸತಕ್ಕದ್ದು.

**21.1.2.** ಬಹು ಕುಟುಂಬ ನಿವಾಸಗಳನ್ನು ಹೊಂದಿರುವ ಪ್ರತಿ ಕಟ್ಟಡ ಮತ್ತು ಜನಸಮಾವೇಶ ಹೊಂದಿರುವ ಎಲ್ಲಾ ಪ್ರದೇಶಗಳಲ್ಲಿ ನಿರ್ಗಮನ ಮಾರ್ಗಗಳು ಈ ಉಪವಿಧಿಗಳ ಕನಿಷ್ಟ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು.

**21.1.3.** ಎಲ್ಲಾ ನಿರ್ಗಮನ ಮಾರ್ಗಗಳು ಅಡೆತಡೆಗಳಿಂದ ಮುಕ್ತವಾಗಿರಬೇಕು.

**21.1.4.** ಯಾವುದೇ ಕಟ್ಟಡವನ್ನು ನಿರ್ಗಮನ ಮಾರ್ಗಗಳ ಸಂಖ್ಯೆ ಮತ್ತು ಅಳತೆಗಳನ್ನು ಅಗತ್ಯಕ್ಕಿಂತಲೂ ಕಡಿಮೆ ಮಾಡುವ ಉದ್ದೇಶದಿಂದ ಮಾರ್ಪಾಡಿಸಬಾರದು.

**21.1.5.** ನಿರ್ಗಮನ ಮಾರ್ಗಗಳು ಸ್ಪಷ್ಟವಾಗಿ ಕಾಣುವಂತಿರಬೇಕು, ನಿರ್ಗಮನ ಮಾರ್ಗಗಳನ್ನು ತಲುಪುವ ದಾರಿಗಳನ್ನು ಪ್ರತಿ ಅಂತಸ್ತನ್ನು ಉಪಯೋಗಿಸುವ ಜನರಿಗೆ ಮಾರ್ಗದರ್ಶನ ನೀಡುವಂತೆ ಸ್ಪಷ್ಟವಾಗಿ ಗುರುತಿಸಬೇಕು.

**21.1.6.** ಅಗತ್ಯವಿರುವೆಡೆ, ನಿರ್ಗಮನ ಮಾರ್ಗಗಳನ್ನು ಸಾಕಷ್ಟು ಪ್ರಮಾಣದಲ್ಲಿ ಮತ್ತು ನಿರಂತರವಾಗಿ ಪ್ರಕಾಶಗೊಳಿಸತಕ್ಕದ್ದು.

**21.1.7.** ಅಗ್ನಿಶಾಮಕ ಸಲಕರಣೆಯನ್ನು ಸೂಕ್ತ ಸ್ಥಳದಲ್ಲಿ ಸ್ಥಾಪಿಸತಕ್ಕದ್ದು ಮತ್ತು ಸ್ಪಷ್ಟವಾಗಿ ಗುರುತಿಸಿರತಕ್ಕದ್ದು.

**21.1.8.** ಸಂಬಂಧಪಟ್ಟ ಎಲ್ಲಾ ವ್ಯಕ್ತಿಗೂ ವಿಳಂಬ ಮಾಡ ರೀತಿಯಲ್ಲಿ ಸ್ಥಳವನ್ನು ವಿಸರ್ಜಿಸುವಂತೆ ಅಪಾಯ ಸೂಚಕ ಉಪಕರಣಗಳನ್ನು ಅಳವಡಿಸತಕ್ಕದ್ದು.

**21.1.9.** ಎಲ್ಲಾ ನಿರ್ಗಮನ ಮಾರ್ಗಗಳೂ ರಸ್ತೆಗೆ ತಲುಪಬಲ್ಲ ಕಟ್ಟಡದ ಹೊರಭಾಗಕ್ಕಾಗಲೀ ಅಥವಾ ಹೊರಗಿನ ಬಯಲು ಪ್ರದೇಶಕ್ಕಾಗಲೀ ನಿರಂತವಾಗಿ ಹೋಗಬಲ್ಲ ಹಾದಿಯನ್ನು ಒದಗಿಸತಕ್ಕದ್ದು.

**21.1.10.** ನಿರ್ಗಮನ ಮಾರ್ಗಗಳನ್ನು ಮತ್ತೊಂದು ಆಕ್ರಮಿತ ಘಟಕದ ಮೂಲಕ ದಾಟಿ ಹೋಗದೇ ನೇರವಾಗಿ ಪ್ರವೇಶಿಸುವಂತೆ ವ್ಯವಸ್ಥೆಗೊಳಿಸತಕ್ಕದ್ದು.

**21.2. ನಿರ್ಗಮನ ಮಾರ್ಗಗಳ ವ್ಯವಸ್ಥೆ:–** ಅಂತಸ್ತಿನ ಮೇಲೆ ನಡೆಯುವ ದೂರವು ಕೋಷ್ಟಕ–14 ರಲ್ಲಿ ನಿಗದಿ ಪಡಿಸಿರುವ ಮಿತಿಯನ್ನು ಮೀರಿದ ಹಾಗೆ ನಿರ್ಗಮನ ಮಾರ್ಗಗಳನ್ನು ಸ್ಥಾಪಿಸ ತಕ್ಕದ್ದು.

**21.3. ನಿರ್ಗಮನ ಮಾರ್ಗಗಳ ಸಾಮರ್ಥ್ಯ:–**

(i) ಯಾವುದೇ ನಿರ್ಗಮನ ಮಾರ್ಗದ ಸಾಮಾರ್ಥ್ಯವನ್ನು ಅಳೆಯುವ ನಿರ್ಗಮನದ ಅಗಲದ ಪ್ರಮಾಣ 50.00 ಸೆಂಟಿ ಮೀಟರ್ ಇರತಕ್ಕದ್ದು, 25.00 ಸೆಂಟಿಮೀಟರ್ ಸ್ಪಷ್ಟ ಅಗಲವನ್ನು ಅರ್ಧ ಪ್ರಮಾಣವೆಂದು ಲೆಕ್ಕಹಾಕತಕ್ಕದ್ದು, 25.00 ಸೆಂಟಿಮೀಟರ್‌ಗಿಂತಲೂ, ಕಡಿಮೆ ಇರುವ ಸ್ಪಷ್ಟ ಅಗಲವನ್ನು ನಿರ್ಗಮನ ಮಾರ್ಗದ ಅಳತೆಗೆ ಲೆಕ್ಕ ಹಾಕತಕ್ಕದ್ದು.

(ii) ನಿರ್ಗಮನದ ಹಾಲಿ ಅಗಲದ ಪ್ರಮಾಣಕ್ಕೆ ಅಧಿಭೋಗದಾರರ ಸಂಖ್ಯೆಯು ಕೋಷ್ಠಕ–15ರಲ್ಲಿ ನಿಗದಿಪಡಿಸಿರುವಂತೆ ಇರತಕ್ಕದ್ದು.

**21.4. ಅಧಿಭೋಗದ ಹೊರೆ:–** ಕಟ್ಟಡಗಳ ಅಧಿಭೋಗದ ಹೋರೆಯನ್ನು ಕೋಷ್ಠಕ–16ರಲ್ಲಿ ನಮೂದಿಸಿರುವಂತೆ ಲೆಕ್ಕಹಾಕತಕ್ಕದ್ದು.

**21.5. ನಿರ್ಗಮನ ಮಾರ್ಗಗಳ ಸಂಖ್ಯೆ:–**

(i). ನಿರ್ಗಮನ ಮಾರ್ಗಗಳ ಸ್ಥಾನ, ಅಗಲ ಮತ್ತು ಸಂಖ್ಯೆಗಳು ನಡೆಯುವ ದೂರ, ನಿರ್ಗಮನ ಮಾರ್ಗಗಳ ಸಾಮರ್ಥ್ಯ ಮತ್ತು ಅಧಿಭೋಗದ ಹೊರೆಯ ಆಧಾರ ಮೇರೆಗೆ ಅಧಿಭೋಗಿದಾರರ ಸಂಖ್ಯೆಗೆ ಅನುಸಾರವಾಗಿ ಇರತಕ್ಕದ್ದು.

(ii) 15.00ಮೀಟರ್ ಮತ್ತು ಅದಕ್ಕಿಂತಲೂ ಹೆಚ್ಚಿನ ಎತ್ತರದ ಕಟ್ಟಡಗಳ ಅಂತಸ್ತಿನ ಕನಿಷ್ಟ ನಿರ್ಗಮನ ಮಾರ್ಗಗಳ ಸೇವೆಯನ್ನು ಒದಗಿಸತಕ್ಕದ್ದು ಮತ್ತು ಇವುಗಳಲ್ಲಿ ಒಂದಾದರೂ ಕಟ್ಟಡದ ಒಳಗಿನ ಮೆಟ್ಟಿಲು ಮಾರ್ಗವಾಗಿರತಕ್ಕದ್ದು.

**ಕೋಷ್ಟಕ–14**

**(ಉಪವಿದಿಗಳ ಸಂಖ್ಯೆ:–21.2)**

ಅದಿಭೋಗದಾರರಿಗೆ ನಡೆಯುವ ದೂರ

| ಕ್ರಮ ಸಂಖ್ಯೆ | ಅಧಿಭೋಗದ ವಿಧಾನ | ಗರಿಷ್ಟ ನಡೆಯುವ ದೂರ ಮೀ.ಗಳಲ್ಲಿ |
|---|---|---|
| 1 | ವಾಸ | 22.50 ಮೀಟರ್ |
| 2 | ಶೈಕ್ಷಣಿಕ | 22.50 ಮೀಟರ್ |
| 3 | ಸಂಸ್ಥೆಗಳು | 22.50 ಮೀಟರ್ |
| 4 | ಸಭೆ ಸಮಾವೇಶ | 30.00 ಮೀಟರ್ |
| 5 | ವ್ಯಾಪಾರ | 45.00 ಮೀಟರ್ |
| 6 | ವಾಣಿಜ್ಯ | 30.00 ಮೀಟರ್ |
| 7 | ಕೈಗಾರಿಕೆ | 30.00 ಮೀಟರ್ |
| 8 | ಉಗ್ರಾಣ | 30.00 ಮೀಟರ್ |
| 9 | ಅಪಾಯಕರ ಕಟ್ಟಡ | 22.50 ಮೀಟರ್ |

**ಸೂಚನೆ:–**

1. ಕಟ್ಟಡದ ಮೊಗಸಾಲೆಯ ತುತ್ತತುದಿಯಿಂದ ನಿರ್ಗಮನ ಮಾರ್ಗಕ್ಕೆ ನಡೆಯುವ ದೂರವು ಶೈಕ್ಷಣಿಕ, ಸಭೆ ಸಮಾವೇಶ ಮತ್ತು ಸಂಸ್ಥೆಗಳ ಅಧಿಭೋಗಕ್ಕೆ ಹೊರತು ಪಡಿಸಿ ಮೇಲೆ ನಮೂದಿಸಿರುವ ದೂರದ ಅರ್ಧದಷ್ಟನ್ನು ಮೀರತಕ್ಕದ್ದಲ್ಲ. ಈ ಅಧಿಭೋಗಗಳ ಪ್ರಕರಣಗಳಲ್ಲಿ ಈ ದೂರವು ಆರು ಮೀಟರ್‌ನ್ನು ಮೀರತಕ್ಕದ್ದಲ್ಲ.
2. ಕಟ್ಟಡದ ಯಾವುದೇ ಕೊಠಡಿ, ಸ್ಥಳ ಅಥವಾ ಅಂತಸ್ತಿಗೆ ಒಂದಕ್ಕಿಂತ ಹೆಚ್ಚು ನಿರ್ಗಮನ ಮಾರ್ಗದ ಅಗತ್ಯವಿದ್ದಾಗ ನಿರ್ಗಮನ ಮಾರ್ಗಗಳನ್ನು ಒಂದರಿಂದ ಮತ್ತೊಂದಕ್ಕೆ ಸಾಧ್ಯವಾದಷ್ಟು ದೂರವಿರುವಂತೆ ನೆಲೆಗೊಳಿಸತಕ್ಕದ್ದು ಮತ್ತು ವಿವಿಧ ದಿಕ್ಕುಗಳಿಂದ ನಿರ್ಗಮನ ಮಾರ್ಗಗಳಿಗೆ ನೇರವಾದ ಪ್ರವೇಶ ಒದಗುವಂತೆ ವ್ಯವಸ್ಥೆಗೊಳಿಸತಕ್ಕದ್ದು.

**ಕೋಷ್ಟಕ–15**

**(ಉಪವಿಧಿ–21.3)**

**ನಿರ್ಗಮನದ ಪ್ರತಿ ಅಗಲದ ಪ್ರಮಾಣಕ್ಕೆ ಅಧಿಭೋಗದಾರರು – ಗರಿಷ್ಠ ಅಧಿಭೋಗದಾರರ ಸಂಖ್ಯೆ**

| ಕ್ರಮ ಸಂಖ್ಯೆ | ಸ್ವಾಧೀನಾನುಭೋಗದಾರರ ಗುಂಪು | ಮೆಟ್ಟಿಲು ಮಾರ್ಗ | ಇಳಿದಾರಿ (ರ್‍ಯಾಂಪ್) | ಬಾಗಿಲುಗಳು |
|---|---|---|---|---|
| 1 | ವಾಸ | 25 | 50 | 75 |
| 2 | ಶೈಕ್ಷಣಿಕ | 25 | 50 | 75 |
| 3 | ಸಂಸ್ಥೆಗಳು | 25 | 50 | 75 |
| 4 | ಸಭೆ ಸಮಾವೇಶ | 40 | 50 | 60 |
| 5 | ವ್ಯಾಪಾರ | 50 | 60 | 75 |
| 6 | ವಾಣಿಜ್ಯ | 50 | 60 | 75 |
| 7 | ಕೈಗಾರಿಕೆ | 50 | 60 | 75 |
| 8 | ಉಗ್ರಾಣ | 50 | - | 75 |
| 9 | ಅಪಾಯಕರ ಕಟ್ಟಡ | 25 | 30 | 40 |

**ಸೂಚನೆ:–** ಸಮತಲ ವ್ಯವಸ್ಥೆ; ವಾಣಿಜ್ಯ ಉಗ್ರಾಣ, ಕೈಗಾರಿಕೆ, ವ್ಯಾಪಾರ ಮತ್ತು ಸಭೆ ಸಮಾವೇಶಗಳ ಅಧಿಭೋಗಗಳಲ್ಲಿ ಮೇಲ್ಕಂಡ ಕೋಷ್ಟಕದಲ್ಲಿನ ಮೆಟ್ಟಿಲು ಮರ್ಗಗಳ ಅಗಲದ ಪ್ರಮಾಣವನ್ನು ಶೇಕಡ.50ಕ್ಕೆ ಹೆಚ್ಚಿಸಿಕೊಳ್ಳಬಹುದು ಮತ್ತು ಕೈಗಾರಿಕೆ ಅಧಿಭೋಗದ ಕಟ್ಟಡಗಳಲ್ಲಿ ಶೇ.100 ರಷ್ಟು ಹೆಚ್ಚಿಸಿಕೊಳ್ಳಬಹುದು.

**ಕೋಷ್ಟಕ–16**

**(ಉಪವಿಧಿ–21.4)**

**ಅಧಿಭೋಗದ ಹೊರೆ**

| ಕ್ರಮ ಸಂಖ್ಯೆ | ಸ್ವಾಧೀನಾನುಭೋಗದಾರರ ಗುಂಪು | ಚದರ ಮೀಟರುಗಳಲ್ಲಿ ಸ್ವಾಧೀನಾನುಭೋಗದಾರರ ಸಾಮರ್ಥ್ಯ ಒಟ್ಟು ಅಂಗಳ ಪ್ರದೇಶ: ವ್ಯಕ್ತಿ |
|---|---|---|
| 1 | ವಾಸ | 12.5 |
| 2 | ಶೈಕ್ಷಣಿಕ | 4.0 |
| 3 | ಸಂಸ್ಥೆಗಳು | 15.0* |

| ಕ್ರಮ ಸಂಖ್ಯೆ | ಸ್ವಾಧೀನಾನುಭೋಗದಾರರ ಗುಂಪು | ಚದರ ಮೀಟರುಗಳಲ್ಲಿ ಸ್ವಾಧೀನಾನುಭೋಗದಾರರ ಸಾಮರ್ಥ್ಯ ಒಟ್ಟು ಅಂಗಳ ಪ್ರದೇಶ: ವ್ಯಕ್ತಿ |
|---|---|---|
| 4 | ಸಭೆ ಸಮಾವೇಶಗಳು<br>(ಎ) ಭದ್ರಪಡಿಸಿದ ಅಥವಾ ಸಡಿಲವಾಡ ಆಸನಗಳು ಮತ್ತು ನೃತ್ಯ ಅಂಗಳಗಳದೊಂದಿಗೆ.<br>(ಬಿ)ಊಟದ ಕೊಠಡಿಗಳೂ ಸೇರಿದಂತೆ ಆಸನಗಳ ವ್ಯವಸ್ಥೆ ರಹಿತವಾದುದು. | <br>0.6**<br><br>1.5** |
| 5 | ವ್ಯಾಪಾರ ಮತ್ತು ಕೈಗಾರಿಕೆ | 10.0 |
| 6 | ಉಗ್ರಾಣ | 30.0 |
| 7 | ಅಪಾಯಕರ ಕಟ್ಟಡ. | 10.0 |

* ಒಟ್ಟು ಪ್ರದೇಶ ಅಂದರೆ ಮೇಲುಪಾಯದ ವಿಸ್ತೀರ್ಣ ಅಥವಾ ಆವೃತ ಪ್ರದೇಶದ ವಿಸ್ತೀರ್ಣ ಎಂದರ್ಥ. ವೃದ್ಧರಿಗಾಗಿ, ನಿರ್ಮಿಸಿರುವ ಮಲಗುವ ಜಾಗಗಳು ಅಥವಾ ಮನೆಗಳು, ಅನಾಥಾಲಯಗಳು, ಆಶ್ರಯ ತಾಣಗಳು ಮೊದಲಾದವುಗಳಲ್ಲಿ ನಿದ್ದೆಗಾಗಿ ಸ್ಥಳಾವಕಾಶ ಮಾಡಿರುವ ಸಂದರ್ಭಗಳಲ್ಲಿ ಅಧಿಭೋಗದ ಹೊರೆಯನ್ನು ಪ್ರತಿ ವ್ಯಕ್ತಿಗೆಒಟ್ಟು ನೆಲ ವಿಸ್ತೀರ್ಣಕ್ಕೆ 7.50ಚ.ಮೀಗೂ ಕಡಿಮೆ ಇಲ್ಲದಂತೆ ಲೆಕ್ಕ ಹಾಕ ತಕ್ಕದ್ದು.

** ಒಟ್ಟು ನೆಲ ವಿಸ್ತೀರ್ಣವು ಇದರೊಂದಿಗೆ ಪ್ರಮುಖ ಸಮಾವೇಶ ಕೊಠಡಿ ಅಥವಾ ಸ್ಥಳವನ್ನು ಮತ್ತು ಅದೇ ಅಂತಸ್ತು ಅಥವಾ ಅದರ ಮೇಲಿನ ಅಂತಸ್ತುಗಳಲ್ಲಿ ಒಂದೇ ಪ್ರದೇಶದ ಮೂಲಕ ಅಧಿಭೋಗದಾರರ ಉಪಯೋಗಕ್ಕೆ ಅಥವಾ ಸಮಾವೇಶಗಳಿಗೆ ಲಭ್ಯವಿರುವ ಅಂತಹ ಸಂಬಂಧಪಟ್ಟ ಆಕ್ರಮಿತ ಕೊಠಡಿ ಅಥವಾ ಸ್ಥಳವನ್ನು ಒಳಗೊಳ್ಳುತ್ತದೆ. ಮೊಗಸಾಲೆಗಳು, ಶೌಚಾಗಾರಗಳು ಅಥವಾ ಇತರ ವಿಭಾಗಗಳ ವಿಸ್ತೀರ್ಣಗಳನ್ನು ಒಟ್ಟು ನೆಲ ವಿಸ್ತೀರ್ಣದಿಂದ ತೆಗೆದು ಹಾಕತಕ್ಕದಲ್ಲ. ನಿರ್ದಿಷ್ಟ ಸಮಾವೇಶದ ಅಧಿಭೋಗಕ್ಕಾಗಿ ಸೇವೆ ಸಲ್ಲಿಸುವ ಎಲ್ಲಾ ಸ್ಥಳಗಳೂ ಒಟ್ಟು ನೆಲ ವಿಸ್ತೀರ್ಣದಲ್ಲಿ ಒಳಗೊಳ್ಳುತ್ತದೆ.

**ಸೂಚನೆ:–** ಮೆಜ್ಜನೈನ್ ಅಂತಸ್ತಿನ ಅಧಿಭೋಗದ ಹೊರೆಯನ್ನು ಅದರ ನಿರ್ವಹಣೆ ಹೊತ್ತಿರುವ ಅದರ ಕೆಳಗಿನ ಅಂತಸ್ತಿನ ಅಧಿಭೋಗದ ಹೊರೆಗೆ ಸೇರಿಸತಕ್ಕದ್ದು ಮತ್ತು ನಿರ್ಗಮನ ಮಾರ್ಗಗಳ ಸಾಮರ್ಥ್ಯವನ್ನು ಈ ರೀತಿ ಸ್ಥಿರ ಪಟ್ಟ ಒಟ್ಟು ಅಧಿಭೋಗದ ಹೊರೆಗೆ ಅನುಸಾರವಾಗಿ ಉದ್ದೇಶಿಸತಕ್ಕದ್ದು.

**21.6. ದ್ವಾರಗಳು:–**

ಎ) ಪ್ರತಿ ನಿರ್ಗಮನ ಮಾರ್ಗದ ದ್ವಾರವು ನಿರಂತರವಾಗಿ ಮತ್ತು ಸುರಕ್ಷಿತವಾಗಿ ಹೊರಗೆ ಹೋಗಬಹುದಾದ ಆವರಿಸಲ್ಪಟ್ಟ ಮೆಟ್ಟಿಲು ಮಾರ್ಗ, ಸಮತಲವಾದ ನಿರ್ಗಮನ ಮಾರ್ಗ ಅಥವಾ ಮೊಗಸಾಲೆ ಅಥವಾ ಓಣಿಗೆ ತೆರೆಯಲ್ಪಟ್ಟಿರತಕ್ಕದ್ದು.

ಬಿ) ಯಾವುದೇ ನಿರ್ಗಮನ ಮಾರ್ಗವು ವಾಸದ ಕಟ್ಟಡಗಳಲ್ಲಿ 75.00 ಸೆ.ಮೀ ಮತ್ತು ಇತರ ಕಟ್ಟಡಗಳಲ್ಲಿ 100.00 ಸೆಂ.ಮೀ ಗಿಂತಲೂ ಕಡಿಮೆ ಅಗಲ ಹೊಂದಿರಬಾರದು ನಿರ್ಗಮನ ಮಾರ್ಗದ ದ್ವಾರಗಳ ಎತ್ತರವು 200.00 ಸೆಂ.ಮೀಗಿಂತಲೂ ಕಡಿಮೆ ಇರತಕ್ಕದ್ದಲ್ಲ.

ಸಿ) ನಿರ್ಗಮನ ಮಾರ್ಗದ ದ್ವಾರಗಳನ್ನು ಹೊರಗಡೆಗೆ ಅಂದರೆ ಕೊಠಡಿಯಿಂದ ಹೊರಗೆ ತೆರೆಯುವಂತಿರತಕ್ಕದ್ದು. ಆದರೆ ಯಾವುದೇ ನಿರ್ಗಮನ ಮಾರ್ಗದಲ್ಲಿ ಚಲನವಲನಕ್ಕೆ ತಡೆಯುಂಟು ಮಾಡತಕ್ಕದ್ದಲ್ಲ. ಯಾವುದೇ ದ್ವಾರವನ್ನು ತೆರೆದಾಗ ಮೆಟ್ಟಿಲು ಅಥವಾ ಅದರಲ್ಲಿ ನಿಲ್ಲುವ ಸ್ಥಳದ ಅಗಲವು 90ಸೆಂ.ಮೀ ಗಿಂತಲೂ ಕಡಿಮೆ ಆಗತಕ್ಕದ್ದಲ್ಲ. ಎತ್ತರವಾದ ಅಥವಾ ಜಾರುವ ದ್ವಾರಗಳನ್ನು ಸ್ಥಾಪಿಸತಕ್ಕದ್ದಲ್ಲ.

ಡಿ) ನಿರ್ಗಮನ ಮಾರ್ಗದ ದ್ವಾರಗಳು ತತ್‌ಕ್ಷಣವೇ ಮೆಟ್ಟಿಲಿನ ಕಡೆಗೆ ತೆರೆಯಲ್ಪಡ ತಕ್ಕದಲ್ಲ; ಕಡೆಯ ಪಕ್ಷ ದ್ವಾರದ ಅಗಲದಷ್ಟೇ ಇರುವ ಮೆಟ್ಟಲಿನಲ್ಲಿನ ನಿಲ್ಲುವ ಸ್ಥಳವನ್ನು ಪ್ರತಿ ನಿರ್ಗಮನ ದ್ವಾರದಲ್ಲಿ ಅಳವಡಿಸತಕ್ಕದ್ದು; ನಿಲ್ಲುವ ಸ್ಥಳದ ಮಟ್ಟವು ಅದನ್ನು ಉಪಯೋಗಿಸುವ ಅಂತಸ್ತಿನ ನೆಲದ ಮಟ್ಟದಷ್ಟೇ ಇರತಕ್ಕದ್ದು.

**21.7. ತಿರುಗುವ ದ್ವಾರಗಳು:–**

ಎ) ವಾಸ, ವ್ಯಾಪಾರ ಮತ್ತು ವಾಣಿಜ್ಯದ ಅಧಿಭೋಗಗಳನ್ನು ಹೊರತುಪಡಿಸಿ ಉಳಿದ ಕಡೆಗಳಲ್ಲಿ ತಿರುಗುವ ದ್ವಾರಗಳನ್ನು ಅಗತ್ಯವಾದ ನಿರ್ಗಮನ ಮಾರ್ಗಗಳಾಗಿ ಉಪಯೋಗಿಸತಕ್ಕದ್ದಲ್ಲ. ಆದರೆ ಅಗತ್ಯವಾದ ದ್ವಾರದ ಅಗಲದಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿ ವ್ಯಾಪಿಸತಕ್ಕದ್ದಲ್ಲ.

ಬಿ.) ತಿರುಗುವ ದ್ವಾರಗಳನ್ನು ಅಗತ್ಯವಾದ ನಿರ್ಗಮನ ಮಾರ್ಗಗಳೆಂದು ಪರಿಗಣಿಸಿದಾಗ ಕೆಳಕಂಡ ಕಲ್ಪನೆಗಳಿಗೆ ಒಳಪಟ್ಟಿರುತ್ತದೆ.

1. ಪ್ರತಿ ತಿರುಗುವ ದ್ವಾರವನ್ನು ನಿರ್ಗಮನ ಮಾರ್ಗದ ಅಗಲದ ಪ್ರಮಾಣದಲ್ಲಿ ಅರ್ಧದಷ್ಟಕ್ಕೆ ಲೆಕ್ಕ ಹಾಕತಕ್ಕದ್ದು.
2. ತಿರುಗುವ ದ್ವಾರಗಳನ್ನು ಮೆಟ್ಟಿಲು ದ್ವಾರದ ತಳಭಾಗದಲ್ಲಿ ಸ್ಥಾಪಿಸಬಾರದು, ತಿರುಗುವ ದ್ವಾರದ ಮೂಲಕ ಉಪಯೋಗಿಸಲ್ಪಡುವ ಪ್ರತಿ ಮೆಟ್ಟಿಲುದ್ವಾರವು ಮೊಗಸಾಲೆ ಅಥವಾ ಮಧ್ಯಂತರ ಕೋಣೆಯ ಮೂಲಕ ಉಪಯೋಗಿಸಲ್ಪಡತಕ್ಕದ್ದು.

**21.8. ಮಹಡಿ ಮೆಟ್ಟಿಲು :–**

ಎ) ಒಳಭಾಗದ ಮಹಡಿ ಮೆಟ್ಟಿಲುಗಳನ್ನು ದಹ್ಯೇತರ ವಸ್ತುಗಳಿಂದ ನಿರ್ಮಿಸತಕ್ಕದ್ದು.

ಬಿ) ವಸತಿ ಕಟ್ಟಡಗಳನ್ನು ಹೊರತು ಪಡಿಸಿ ನೆಲ ಅಂತಸ್ತಿನೊಂದಿಗೆ ಮೂರು ಅಂತಸ್ತುಗಳನ್ನೊಳಗೊಂಡ ಎಲ್ಲ ಕಟ್ಟಡಗಳಲ್ಲಿಯೂ ಒಳಭಾಗದ ಮೆಟ್ಟಿಲುಗಳನ್ನು ಅವುಗಳ ಒಂದು ಪಾರ್ಶ್ವವಾದರೂ ಹೊರಗಿನ ಗೋಡೆಗೆ ಲಗತ್ತಾಗಿರುವಂತೆ ಸ್ವಯಂ ಅಗತ್ಯಗಳನ್ನು ಒಳಗೊಂಡಿರುವ ಘಟಕಗಳಾಗಿ ನಿರ್ಮಿಸತಕ್ಕದ್ದು. 15.00ಮೀ ಮತ್ತು ಅದಕ್ಕಿಂತಲೂ ಹೆಚ್ಚು ಎತ್ತರ ಹೊಂದಿರುವ ಕಟ್ಟಡಗಳಲ್ಲಿನ ಮಹಡಿ ಮೆಟ್ಟಿಲು ಸಂಪೂರ್ಣವಾಗಿ ಆವೃತವಾಗಿರತಕ್ಕದ್ದು

ಸಿ) ಅಗ್ನಿ ನಿರೋಧಕ ಸಾಮರ್ಥ್ಯವಿರುವ ವಸ್ತುಗಳಿಂದ ಲಿಫ್ಟ್‌ನ ರಂಧ್ರವು ಪೂರ್ಣವಾಗಿ ಆವರಿಸಲ್ಪಡದೆ ಇದ್ದಲ್ಲಿ ಮಹಡಿ ಮೆಟ್ಟಿಲನ್ನು ಲಿಫ್ಟ್‌ನ ಸುತ್ತ ವ್ಯವಸ್ಥೆಗೊಳಿಸತಕ್ಕುದ್ದಲ್ಲ.

ಡಿ) ದಹ್ಯ ವಸ್ತುಗಳಿಂದ ಟೊಳ್ಳು ನಿರ್ಮಾಣಕ್ಕೆ ಅನುಮತಿ ನೀಡತಕ್ಕದ್ದಲ್ಲ.

ಇ) ಒಳಭಾಗದ ಮೆಟ್ಟಿಲಿನ ಕನಿಷ್ಟ ಅಗಲವು ಉಪವಿಧಿ 20.6ರ ಅನ್ವಯ ಇರತಕ್ಕದ್ದು.

ಎಫ್) ನೋಸಿಂಗನ್ನು ಹೊರತು ಪಡಿಸಿ ತುಳಿತದ ಕನಿಷ್ಟ ಅಗಲವು ಉಪವಿಧಿ 20.6 ರನ್ವಯ ಇರತಕ್ಕದ್ದು

ಜಿ) ತುಳಿತದ ಗರಿಷ್ಟ ಎತ್ತರ ಉಪವಿಧಿ 20.6 ರ ಅನ್ವಯ ಇರತಕ್ಕದ್ದು.

ಹೆಚ್) ಎಲ್ಲಾ ಕಟ್ಟಡಗಳಲ್ಲಿ 100.00 ಸೆಂ.ಮೀ ಕನಿಷ್ಟ ಎತ್ತರ ಹೊಂದಿರುವ ಕೈ ಕಂಬಿಗಳನ್ನು ಅಳವಡಿಸ ತಕ್ಕದ್ದು ಮತ್ತು ಇವುಗಳಿಗೆ ಭದ್ರವಾದ ಆಧಾರಗಳನ್ನು ಒದಗಿಸತಕ್ಕದ್ದು.

ಐ) ತುರ್ತು ನಿರ್ಗಮನದ ಸನ್ನಿವೇಶಗಳ ಹೊರತಾಗಿ ಸಾರ್ವಜನಿಕ ಕಟ್ಟಡಗಳಲ್ಲಿ ತಿರುಗುವ ಮೆಟ್ಟಲುಗಳನ್ನು ಒದಗಿಸತಕ್ಕದಲ್ಲ.

**21.9. ಅಗ್ನಿ ಅಕಸ್ಮಿಕಗಳಿಂದ ಪಾರಾಗುವ ಮಾರ್ಗಗಳು ಅಥವಾ ಹೊರಗಿನ ಮೆಟ್ಟಿಲುಗಳು:–**

ಎ) ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಗಳನ್ನು ಕಟ್ಟಡವನ್ನು ವಿಸರ್ಜಿಸುವ ಸಮಯದ ಲೆಕ್ಕದ ಗಣನೆಗೆ ತೆಗೆದು ಕೊಳ್ಳತಕ್ಕದ್ದಲ್ಲ.

ಬಿ) ಜಮೀನಿನ ಮಟ್ಟದ ಮೇಲಿರುವ ಎಲ್ಲ ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಗಳನ್ನು ನೇರವಾಗಿ ಜಮೀನಿಗೆ ಸಂಪರ್ಕಪಡಿಸತಕ್ಕದ್ದು.

ಸಿ) ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಗಳ ಪ್ರವೇಶದ್ವಾರಗಳು ಪ್ರತ್ಯೇಕವಾಗಿರತಕ್ಕದ್ದು ಮತ್ತು ಒಳಭಾಗದ ಮೆಟ್ಟಿಲಿನಿಂದ ದೂರದಲ್ಲಿರ ತಕ್ಕದ್ದು.

ಡಿ) ಅಗ್ನಿ ನಿರೋಧಕ ಶಕ್ತಿ ಹೊಂದಿರುವ ದ್ವಾರವನ್ನು ಹೊರತು ಪಡಿಸಿ ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಕ್ಕೆ ಸೇರುವ ದಾರಿಯು ಎಲ್ಲಾ ಸಂದರ್ಭಗಳಲ್ಲಿಯೂ ಅಡೆತಡೆಗಳಿಂದ ಮುಕ್ತವಾಗಿರತಕ್ಕದ್ದು.

ಇ) ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಗಳನ್ನು ದಹ್ಯೇತರ ವಸ್ತುಗಳಿಂದ ನಿರ್ಮಿಸತಕ್ಕದ್ದು.

ಎಫ್) ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಗಳಿಗಾಗಿ ಸಿದ್ಧಪಡಿಸಿದ ಮೆಟ್ಟಿಲುಗಳು 75.00ಸೆಂ.ಮೀ ಅಗಲಕ್ಕೆ ಕಡಿಮೆ ಇಲ್ಲದೆ. ತುಳಿತದ ಅಗಲ 20.00 ಸೆಂ.ಮೀ ಮತ್ತು ತುಳಿತದ ಎತ್ತರ 19.00ಸೆಂ.ಮೀಗೆ ಹೆಚ್ಚಿಲ್ಲದಂತೆ ನೇರವಾದ ಸಾಲನ್ನು ಹೊಂದಿರತಕ್ಕದ್ದು ತುಳಿತದ ಎತ್ತರಗಳ ಸಂಖ್ಯೆಯನ್ನು ಪ್ರತಿಸಾಲಿಗೆ 16 ರಂತೆ ಮಿತಿಗೊಳಿಸತಕ್ಕದ್ದು.

ಜಿ) ಕೈಕಂಬಿಗಳ ಎತ್ತರವು 100.00ಸೆಂ.ಮೀಗೆ ಕಡಿಮೆ ಇಲ್ಲದಂತೆ ಇರತಕ್ಕದ್ದು.

**21.10**. ಆವರ್ತಾಕಾರದ ಮಹಡಿ ಮೆಟ್ಟಿಲುಗಳು (ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಮಾರ್ಗಗಳು):– ಆವರ್ತಾಕಾರದ ಮೆಟ್ಟಿಲುಗಳನ್ನು ಅಗ್ನಿ ಆಕಸ್ಮಿಕಗಳಿಂದ ಪಾರಾಗುವ ಉದ್ದೇಶದಿಂದ ಅವುಗಳನ್ನು ಬಾಲ್ಕನಿಗಳು ಮತ್ತು ಟೆರೇಸ್‌ಗಳಂತಹ ಪ್ಲಾಟ್‌ಫಾರಂಗಳಿಗೆ ಸೇರಿಸದ ಹೊರತು ಕಡಿಮೆ ಅಧಿಭೋಗದ ಹೊರೆ ಇರುವ ಮತ್ತು 9.00 ಮೀ.ಗಳಿಗಿಂತಲೂ ಹೆಚ್ಚು ಎತ್ತರವಿಲ್ಲದ ಕಟ್ಟಡಗಳಿಗೆ ಮಿತಿಗೊಳಿಸತಕ್ಕದ್ದು. ಆವರ್ತಾಕಾರದ ಮಹಡಿ ಮೆಟ್ಟಿಲು 150.00 ಮೀಗಿಂತಲೂ ಕಡಿಮೆ ವ್ಯಾಸವನ್ನು ಹೊಂದಿರತಕ್ಕದ್ದಲ್ಲ ಮತ್ತು ಸಾಕಷ್ಟು ತಲೆಗೆ ತಾಕಬಹುದಾದ ಎತ್ತರವನ್ನು ಹೊಂದಿರುವಂತೆ ರೂಪಿಸತಕ್ಕದ್ದು.

**21.11. ರ್‍ಯಾಂಪ್‌ಗಳು:–** 1:10 ಪ್ರಮಾಣಕ್ಕಿಂತಲೂ ಹೆಚ್ಚು ಇಳಿಜಾರು ಹೊಂದಿರದ ರ್‍ಯಾಂಪ್‌ಗಳ ಬದಲಿ ವ್ಯವಸ್ಥೆ ಮಾಡಬಹುದು ಮತ್ತು ಇವುಗಳು ಮೆಟ್ಟಿಲುಗಳಿಗೆ ಸಂಬಂಧಿಸಿದ ಆವರಣ, ಸಾಮರ್ಥ್ಯ ಹಾಗೂ ಅಳತೆಗಳ ಎಲ್ಲಾ ಅಗತ್ಯಗಳನ್ನು ಪೂರೈಸತಕ್ಕದ್ದು, ವಿಶೇಷ ಉಪಯೋಗಗಳಿಗಾಗಿ ಹೆಚ್ಚು ಇಳಿಜಾರುಗಳನ್ನು, ಆದರೆ ಯಾವುದೇ ಸಂದರ್ಭದಲ್ಲಿ 1:8 ಪ್ರಮಾಣಕ್ಕಿಂತಲೂ ಹೆಚ್ಚಿಲ್ಲದಂತೆ, ಅಳವಡಿಸತಕ್ಕದ್ದು, 1:10 ಕ್ಕಿಂತ್ತಲೂ ಹೆಚ್ಚಾದ ಇಳಿಜಾರುಗಳಲ್ಲಿ ಮತ್ತು ಇದರ ಉಪಯೋಗದಿಂದ ಜಾರುವ ಅಪಾಯವಿರುವಗ ಜಾರದಂತಿರುವ ಅನುಮೋದಿತ ವಸ್ತುಗಳಿಂದ ರ್‍ಯಾಂಪಿನ ಮೆಲ್ಮೈಯನ್ನು ಸಮಪಡಿಸತಕ್ಕದ್ದು.

**21.12. ನಿರ್ಗಮನ ಮೊಗಸಾಲೆಗಳು ಮತ್ತು ಹಾದು ಹೋಗುವ ಮಾರ್ಗಗಳು:–** ನಿರ್ಗಮನ ಮೊಗಸಾಲೆಗಳು ಮತ್ತು ಹಾದು ಹೋಗುವ ಮಾರ್ಗಗಳು ನಿರ್ಗಮನ ಮಾರ್ಗಗಳತ್ತ ಸಾಗುವ ದಿಕ್ಕಿನಲ್ಲಿರುವ ನಿರ್ಗಮನ ದ್ವಾರಗಳ ಅಗತ್ಯ ಒಟ್ಟು ಅಗಲದ ಎರಡರಷ್ಟಕ್ಕಿಂತಲೂ ಕಡಿಮೆ ಅಗಲ ಹೊಂದಿರ ತಕ್ಕದ್ದಲ್ಲ. ಮೊಗಸಾಲೆಗಳು ಮತ್ತು ಹಾದು ಹೋಗುವ ಮಾರ್ಗಗಳ ಮೂಲಕ ಮೆಟ್ಟಿಲುಗಳನ್ನು ಅಳವಡಿಸಿದಲ್ಲಿ ಮೊಗಸಾಲೆಗಳು ಮತ್ತು ಹಾದು ಹೋಗುವ ಮಾರ್ಗಗಳನ್ನು ಎತ್ತರ 2.40ಮೀ ಗಳಿಗಿಂತ ಕಡಿಮೆ ಇರತಕ್ಕದಲ್ಲ.

## ಭಾಗ–IV

## ಕಟ್ಟಡ ಸ್ವರೂಪದ ರಚನೆ ಮತ್ತು ಇತರ ಅಗತ್ಯಗಳು

**22.0. ಕಟ್ಟಡ ಸ್ವರೂಪದ ರಚನೆ:–**

**22.1.** ಕಟ್ಟಡಗಳ ಮೇಲಿನ ಭಾರ ಮತ್ತು ಒತ್ತಡವು ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ VI ಸ್ಟ್ರಕ್ಚರಲ್ ಡಿಜೈನ್ ಸೆಕ್ಷನ್ ಆನ್ ಲೋಡ್ಸ್ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**22.2.** ಕಟ್ಟಡ ತಳಪಾಯಗಳ ಸ್ವರೂಪಗಳ ಮತ್ತು ಮೇಲಿನ ಸ್ವರೂಪಗಳ ಮರದ ಕೆಲಸ, ಕಟ್ಟಣೆ ಕೆಲಸ, ರೀಇನ್‌ಫೋರ್ಸ್‌ಡ್ ಅಥವಾ ಪ್ರಿಸ್ಟ್ರೆಸ್‌ಡ್ ಕಾಂಕ್ರೀಟ್ ಕೆಲಸ ಇವುಗಳು ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ VI ಸ್ಟ್ರಕ್ಚರಲ್ ಡಿಜೈನ್ ಸೆಕ್ಷನ್–1 ಲೋಡ್ಸ್, ಸೆಕ್ಷನ್–2 ಫೌಡೇಷನ್ಸ್, ಸೆಕ್ಷನ್–3 ವುಡ್, ಸೆಕ್ಷನ್–4 ಮೆಸನರಿ, ಸೆಕ್ಷನ್–5 ಕಾಂಕ್ರೀಟ್, ಸೆಕ್ಷನ್–6 ಸ್ಟೀಲ್ಸ್ ಮತ್ತು ಸೆಕ್ಷನ್–7 ಪ್ರಿ ಫ್ಯಾಬ್ರಿಕೇಷನ್& ಸಿಸ್ಟಂ ಬಿಲ್ಡಿಂಗ್ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**23.0. ಅಗ್ನಿ ಸುರಕ್ಷಣಾ ಅಗತ್ಯಗಳು.**

**23.1.** ಆಸ್ತಿ ಮತ್ತು ನಿವಾಸಿಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಅಗ್ನಿ ದುರಂತದಿಂದ ಸುರಕ್ಷತೆ ಒದಗಿಸಿರುವುದಾಗಿ ಭರವಸೆ ನೀಡುವಂತೆ ಕಟ್ಟಡಗಳ ಯೋಜನೆ, ರಚನೆ ಮತ್ತು ನಿರ್ಮಾಣಗಳನ್ನು ಕೈಗೊಳ್ಳ ತಕ್ಕದ್ದು ಮತ್ತು ಇವುಗಳನ್ನು ಭಾರತದ ರಾಷ್ಟ್ರೀಯ ಕಟ್ಟಡ

ಸಂಹಿತೆಯ ಭಾಗ IV ಫೈರ್ ಪ್ರೊಟೆಕ್ಷನ್ ಇದಕ್ಕೆ ಅನುಸಾರವಾಗಿ ಕಾರ್ಯಗತಗೊಳಿಸತಕ್ಕದ್ದು ಕಟ್ಟಡದಲ್ಲಿ ಅಗತ್ಯವಿರುವ ಅಗ್ನಿಶಾಮಕದ ಅಗತ್ಯಗಳು, ವ್ಯವಸ್ಥೆಗಳು ಮತ್ತು ಪ್ರತಿಷ್ಠಾಪನೆಗಳು ಸಹ ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ IV ಫೈರ್ ಪ್ರೊಟೆಕ್ಷನ್ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**23.1.1.** ನೆಲ ಅಂತಸ್ತಿನೊಂದಿಗೆ ನಾಲ್ಕು ಮತ್ತು ಅಧಿಕ ಅಂತಸ್ತುಗಳನ್ನೊಳಗೊಂಡ (ಅಥವಾ 15 ಮೀಟರ್ ಮತ್ತು ಅಧಿಕ ಎತ್ತರವಿರುವ) ಕಟ್ಟಡಗಳಲ್ಲಿ ಅಗ್ನಿ ಸುರಕ್ಷತೆಯ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ಅಗ್ನಿ ಶಾಮಕ ದಳದ ನಿರ್ದೇಶಕರಿಂದ ಮುಕ್ತತೆ ಪ್ರಮಾಣ ಪತ್ರವನ್ನು ಪಡೆಯ ತಕ್ಕದ್ದು

**24.0. ಕಟ್ಟಡದ ಸೇವೆಗಳು:–**

ಕಟ್ಟಡಗಳಲ್ಲಿ ಹವಾನಿಯಂತ್ರಣ ಮತ್ತು ಶಾಖೋತ್ಪನ್ನ ಸಲಕರಣೆಗಳ ಯೋಜನೆ, ರಚನೆ ಮತ್ತು ಸ್ಥಾಪನೆಗಳು ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ VIII ಬಿಲ್ಡಿಂಗ್ ಸರ್ವೀಸಸ್, ಸೆಕ್ಷನ್2 ಎಲೆಕ್ಟ್ರಿಕಲ್ ಇನ್‌ಸ್ಟಾಲೇಷನ್ಸ್ ಮತ್ತು ಸೆಕ್ಷನ್3 ಏರ್‌ಕಂಡೀಷಿನಿಂಗ್ ಮತ್ತು ಹೀಟಿಂಗ್ ಇದಕ್ಕೆ ಅನುಸಾರವಾಗಿ ಇರತಕ್ಕದ್ದು

**24.1 ಪ್ಲಂಬಿಂಗ್ ಸೇವೆ:–**

ಕಟ್ಟಡಗಳಲ್ಲಿ ನೀರು ಸರಬರಾಜು ಕ್ರಮಗಳು, ಒಳಚರಂಡಿ ವ್ಯವಸ್ಥೆ ನೈರ್ಮಲ್ಯ ಸ್ಥಾಪನೆ ಮತ್ತು ಅನಿಲ ಸರಬರಾಜು ಸ್ಥಾಪನೆಗಳ ಯೋಜನೆ, ರಚನೆ ಮತ್ತು ಸ್ಥಾಪನೆಗಳು ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ IX ಪ್ಲಂಬಿಂಗ್ ಸರ್ವೀಸಸ್ ಸೆಕ್ಷನ್–1 ವಾಟರ್ ಸಪ್ಲೈ, ಸೆಕ್ಷನ್–2 ಡ್ರೈನೇಜ್ & ಸ್ಯಾನಿಟೇಷನ್ ಮತ್ತು ಸೆಕ್ಷನ್–3 ಗ್ಯಾಸ್ ಸಪ್ಲೈ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**25.0 ದೂರ ಸಂಪರ್ಕ ಸೇವೆಗಳು:–**

ಎ. ಪ್ರತಿ ವಾಸದ ಮನೆ / ವಾಣಿಜ್ಯ ಸಂಕೀರ್ಣ ಕಟ್ಟಡಕ್ಕೆ ಸಾಮ್ರ/ಆಪ್ಟಿಕಲ್ ಫೈಬರ್ ಕೇಬಲ್‌ಗಳನ್ನು ಅಳವಡಿಸಲು ಅನುಕೂಲವಾಗುವಂತೆ ಕಟ್ಟಡದ ಆವರಣ ಗೋಡೆಯ ಹೊರಭಾಗದಿಂದ ಪ್ರವೇಶ ದಾರಿಗೆ ಅವಕಾಶ ಕಲ್ಪಿಸಬೇಕು.

ಬಿ. ಕಟ್ಟಡದ ಆವರಣ ಗೋಡೆಯಿಂದ ಕಟ್ಟಡದ ಒಳಭಾಗದಲ್ಲಿ ಪ್ರವೇಶ ಜಾಗದವರಿಗೆ ಕನಿಷ್ಠ 60 ಸೆ.ಮೀ. ಆಳದಲ್ಲಿ 32 ಮಿ.ಮಿ ವ್ಯಾಸದ ಒಂದೇ ಜಿ.ಐ ಕೊಳವೆಯನ್ನು ಹೊತಿರಬೇಕು. ಆವರಣ ಗೋಡೆಯ ಹೊರಭಾಗದಲ್ಲಿ ಕೊಳವೆಯನ್ನು ಅಳವಡಿಸುವ ಜಾಗದಲ್ಲಿ 60 x 60 x 60 ಸೆ.ಮೀ ಅಳತೆಯ ಗುಂಡಿಯನ್ನು ತೆಗೆಯಬೇಕು.

ಸಿ. ಬಹು ಅಂತಸ್ತಿನ ವಾಸದ / ವಾಣಿಜ್ಯ ಸಂಕೀರ್ಣದ ಕಟ್ಟಡಗಳಿಗೆ ಒಂದು 32 ಮಿ.ಮಿ ಮತ್ತೊಂದು 60 ಮಿ.ಮಿ. ವ್ಯಾಸವಿರುವ ಕನಿಷ್ಠ 2 ಕೊಳವೆಗಳನ್ನು 60 ಸೆ.ಮೀ ಆಳದಲ್ಲಿ ಆವರಣ ಗೋಡೆಯ ಹೊರಭಾಗದಲ್ಲಿ ರಸ್ತೆ ಕಡೆಗೆ ಗುಂಡಿಯನ್ನು ತೆಗೆಯಬೇಕು.

ಡಿ. ದೂರವಾಣಿ ಸಂಪರ್ಕಕ್ಕೆ ಸಂಬಂಧಿಸಿದ ಎಲ್ಲಾ ತಂತಿ ವ್ಯವಸ್ಥೆಯನ್ನು ಕಟ್ಟಡದಲ್ಲಿ ಹುದುಗಿಸಿರುವ ಕೊಳವೆಗಳಲ್ಲಿ ಮೊದಲೇ ಅಳವಡಿಸಿರಬೇಕು.

ಇ. ಬಹು ಅಂತಸ್ತಿನ ಕಟ್ಟಡಗಳಲ್ಲಿ ದೂ ಸಂಪರ್ಕ ಸಾಧನಗಳನ್ನು ಅಳವಡಿಸಲು 4.50 x 3.65 ಮೀ. ಅಳತೆಯ ಒಂದು ಪ್ರತ್ಯೇಕ ಕೊಠಡಿಯನ್ನು ಸಾಧ್ಯವಾದಷ್ಟು ತಳ ಮಾಳಿಗೆಯಲ್ಲಿ ನಿರ್ಮಿಸಬೇಕು. ಈ ಕೊಠಡಿಗೆ ಸಾಕಷ್ಟು ಗಾಳಿ, ಬೆಳಕು ಬರುವಂತಿರಬೇಕು. ಎಲ್ಲಾ ವಸತಿ ಘಟಕಗಳ ಒಳಭಾಗದ ತಂತಿ ವ್ಯವಸ್ಥೆಯನ್ನು ಈ ಕೊಠಡಿಗೆ ತಂದು ಒಂದು ಅಂತ್ಯವರ್ಣ (Termination) ಪೆಟ್ಟಿಗೆಯಲ್ಲಿ ಅಂತ್ಯಗೊಳಿಸಬೇಕು.

ಈ. ಪ್ರತಿಯೊಂದು ಮಹಡಿ / ವಸತಿ ಘಟಕಗಳಿಗೆ ತಳಮಳಿಗೆಯಿಂದ ಕೇಬಲ್‌ಗಳನ್ನು ಸುಲಭವಾಗಿ ಎಳೆದುಕೊಳ್ಳಲು ಅನುಕೂಲವಾಗುವಂತೆ ಒಂದು ಲಂಬವಾದ ಚ್ಯೂಟ್ ಅಳವಡಿಸಿ ಪ್ರತಿಯೊಂದು ಮಹಡಿಗಳನ್ನು ಸಾಧ್ಯವಾದಷ್ಟು ಲಿಫ್ಟ್ / ಮೆಟ್ಟಿಲುಗಳ ಹತ್ತಿರ ಅನುಕೂಲಕರ ಜಾಗದಲ್ಲಿ ಕಿಂಡಿಗಳನ್ನು ಕೊರೆದಿರಬೇಕು.

**26.0. ನಿರ್ಮಾಣದ ಪದ್ಧತಿಗಳು ಮತ್ತು ಸುರಕ್ಷತೆ:**

**26.1.** ವಿವಿಧ ನಿರ್ಮಾಣ ಚಟುವಟಿಕೆಗಳಾದ ಕಟ್ಟಡ ನಿರ್ಮೂಲನೆ, ಅಗೆಯುವುದು, ಸ್ಫೋಟನೆ, ತಳಪಾಯದ ಮಟ್ಟದಿಂದ ಮುಕ್ತಾಯದ ವರೆವಿಗೆ ವಾಸ್ತವಿಕ ನಿರ್ಮಾಣ ಇವುಗಳ ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ 'ಭಾಗ VII' ಕನ್‌ಸ್ಟ್ರಕ್ಷನ್ ಪ್ರಾಕ್ಟಿಸಸ್ & ಸೇಫ್ಟಿ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**26.2.** ಕಟ್ಟಡ ಸಾಮಗ್ರಿಗಳನ್ನು ನಿರ್ಮಾಣದ ನಿವೇಶನದಲ್ಲಿ ಮತ್ತು ಮಹಾನಗರ ಪಾಲಿಕೆಯ ಭೂಮಿಯಲ್ಲಿ ಶೇಖರಿಸುವುದು ಒಳಗೊಂಡಂತೆ ಕಟ್ಟಡ ನಿರ್ಮಾಣದ ವಿವಿಧ ಕಾರ್ಯಚಾರಣೆಯ ಸಮಯದಲ್ಲಿ ಅನುಸರಿಸಬೇಕಾದ ಸುರಕ್ಷಣಾ ಕ್ರಮಗಳು ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ 'VII' ಕನ್‌ಸ್ಟ್ರಕ್ಷನ್ ಪ್ರಾಕ್ಟಿಸಸ್ & ಸೇಫ್ಟಿ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**27.0. ಕಟ್ಟಡ ಸಾಮಗ್ರಿಗಳು:–**

**27.1.** ನಿರ್ಮಾಣಕ್ಕಾಗಿ ಬಳಸಬೇಕಾದ ಕಟ್ಟಡ ಸಾಮಗ್ರಿಗಳ ಅಗತ್ಯತೆಗಳು ಭಾರತದ ರಾಷ್ಟ್ರೀಯ ಕಟ್ಟಡ ಸಂಹಿತೆಯ ಭಾಗ V ಬಿಲ್ಡಿಂಗ್ ಮೆಟಿರಿಯಲ್ಸ್ ಇದಕ್ಕೆ ಅನುಸಾರವಾಗಿ ಇರತಕ್ಕದ್ದು.

**28.0. ಕಟ್ಟಡ ಸಾಮಗ್ರಿಗಳು ರಚನೆ ಮತ್ತು ನಿರ್ಮಾಣದ ವಿಧಾನಗಳಲ್ಲಿ ಪರ್ಯಾಯ ವ್ಯವಸ್ಥೆ:**

**28.1.** ಕಟ್ಟಡ ಉಪವಿಧಿ 22, 24, 25 ಮತ್ತು 26 ಮತ್ತು ಉಪವಿಧಿಯ ಉಳಿದ ಅಗತ್ಯಗಳು ಈ ಉಪವಿಧಿಗಳಲ್ಲಿ ನಿಗದಿ ಪಡಿಸದೇ ಇರುವ ಸಾಮಗ್ರಿಗಳನ್ನು ಅಥವಾ ನಿರ್ಮಾಣದ ರೀತಿಯನ್ನು ಅಂತಹ ಕಾರ್ಯವು ಪ್ರಾಧಿಕಾರದಿಂದ ಮಂಜೂರಾತಿ ಪಡೆದ್ದಲ್ಲಿ ಅವುಗಳ ಉಪಯೋಗಗಳನ್ನು ಅಡ್ಡಿ ಪಡಿಸುವ ಇಂಗಿತ ಹೊಂದಿರುವುದಿಲ್ಲ.

**28.2.** ಕನಿಷ್ಟ ಗುಣಮಟ್ಟ, ಸಾಮರ್ಥ್ಯ ಹೊಂದಿಕೆ, ಪರಿಣಾಮ, ಅಗ್ನಿ, ನೀರು ಮತ್ತು ಶಬ್ದ ನಿರೋಧಕ ಶಕ್ತಿ, ಬಾಳಿಕೆ ಹಾಗೂ ಸುರಕ್ಷತೆಗಳಲ್ಲಿ ಉಪವಿಧಿಯ ಗೊತ್ತುವಳಿಗಳಿಗೆ ಸಮಾನ ಗುಣ ಹೊಂದಿದ್ದು ಸಾಮಾಗ್ರಿಗಳು, ರಚನೆ, ಮತ್ತು ನಿರ್ಮಾಣ ಮತ್ತು ಉದ್ದೇಶಿತ ಕಾರ್ಯಕ್ಕಾಗಿ ನಿವೇದಿಸಿರುವ ಕಾರ್ಯವಿಧಾನ ಇವುಗಳ ಬಗ್ಗೆ ಪ್ರಸ್ತಾಪಿತ ಪರ್ಯಾಯ ವ್ಯವಸ್ಥೆಯು ಉಪವಿಧಿಯ ವಿವಿಧ ಭಾಗಗಳಿಗೆ

ಅನುಸಾರವಾಗಿದ್ದಲ್ಲಿ ಮತ್ತು ಪ್ರಸ್ತಾಪಿತ ಪರ್ಯಾಯ ವ್ಯವಸ್ಥೆಯು ತೃಪ್ತಿಕರವಾಗಿರುವುದಾಗಿ ಕಂಡುಬಂದಲ್ಲಿ ಪ್ರಾಧಿಕಾರವು ಅಂತಹ ಪರ್ಯಾಯ ವ್ಯವಸ್ಥೆಗೆ ಅನುಮೋದನೆ ನೀಡಬಹುದು.

**28.3.** **ಪರೀಕ್ಷೆಗಳು:–** ಈ ಉಪವಿಧಿಯ ಗೊತ್ತುವಳಿಗಳನ್ನು ಅನುಸರಿಸುತ್ತಿರುವ ಬಗ್ಗೆ ಪುರಾವೆ ದೊರಕದಿದ್ದಾಗ ಅಥವಾ ಯಾವುದೇ ಸಾಮಗ್ರಿ, ಅಥವಾ ರಚನೆಯ ವಿಧಾನ, ಅಥವಾ ನಿರ್ಮಾಣವು ಉಪವಿಧಿಯ ಅವಶ್ಯಕತೆಯನ್ನು ಪುಷ್ಟೀಕರಿಸಿಲ್ಲವೆಂಬ ಬಗ್ಗೆ ಪುರಾವೆದೊರೆತಾಗ ಅಥವಾ ಸಾಮಾಗ್ರಿ, ರಚನೆ ಮತ್ತು ನಿರ್ಮಾಣ ವಿಧಾನಗಳ ಬಗ್ಗೆ ಪರ್ಯಾಯ ವ್ಯವಸ್ಥೆಯ ಹಕ್ಕನ್ನು ಸಮರ್ಥಿಸುವಾಗ ತಮ್ಮ ಸಮ್ಮತಿಯನ್ನು ರುಜುವಾತು ಪಡಿಸಲು ಸಾಕಷ್ಟು ಮುಂಚಿತವಾಗಿ ಪ್ರಾಧಿಕಾರವು ಪರೀಕ್ಷೆಗಳಿಗೆ ಅಗತ್ಯಪಡಿಸಬಹುದು, ಈ ಪರೀಕ್ಷೆಗಳನ್ನು ಮಾಲೀಕರ ವೆಚ್ಚದಲ್ಲಿ ಮಾನ್ಯತೆ ಪಡೆದ ಕಾರ್ಯಾಂಗ ಸಂಸ್ಥೆಯು ಮಾಡಬಹುದು ಈ ಉಪವಾಕ್ಯವು ಇಂಡಿಯನ್ ಸ್ಟ್ಯಾಂಡರ್ಡ್ ಇನ್ಸ್‌ಟಿಟ್ಯೂಟ್ ಸಂಸ್ಥೆಯಿಂದ ಮಾನ್ಯತೆ ಪಡೆದ ಸಾಮಗ್ರಿಗಳಿಗೆ ಅನ್ವಯವಾಗುವುದಿಲ್ಲ.

**28.3.1.** ಪರೀಕ್ಷೆಯ ವಿಧಾನಗಳು ಸ್ಟ್ಯಾಂಡರ್ಡ್ ಇನ್ಸ್ಟಿಟ್ಯೂಟ್ ಸಂಸ್ಥೆಯ ಸಂಹಿತೆಗೆ ಅನುಸಾರವಾಗಿ ಇರತಕ್ಕದ್ದು.

**28.3.2.** ಪರ್ಯಾಯ ಸಾಮಗ್ರಿಗಳನ್ನು ಅಂಗೀಕರಿಸಿದ ಬಳಿಕ ಅಂತಹ ಪರೀಕ್ಷೆಗಳ ಫಲಿತಾಂಶಗಳ ಪ್ರತಿಗಳನ್ನು ಎರಡು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಯ ವರೆವಿಗೆ ಪ್ರಾಧಿಕಾರವೂ ಕಾಯ್ದಿರಿಸಿಕೊಳ್ಳತಕ್ಕದ್ದು.

**ಸೂಚನೆ:** ಈ ಉಪವಿಧಿಗಳಲ್ಲಿ ಉಲ್ಲೇಖಿಸಿರುವ ರಾಷ್ಟ್ರೀಯ ಕಟ್ಟಡ ಸಂಹಿತೆಯ ಎಲ್ಲಾ ಉಪ ವಾಕ್ಯಗಳ ಉಲ್ಲೇಖಗಳನ್ನು ಭಾರತೀಯ ರಾಷ್ಟ್ರೀಯ ಕಟ್ಟಡ ಸಂಹಿತೆಯ 1983ರ ಪ್ರಕಟಣೆಗೆ ಉಲ್ಲೇಖಿಸಲಾಗಿದೆ. ತರುವಾಯ ಮಾಡಿದ ಸೇರ್ಪಡೆಗಳಲ್ಲಿ ಈ ಸಂಖ್ಯೆಗಳು ಬದಲಾದರೆ ಅದಕ್ಕೆ ಅನುರೂಪವಾದ ಸಂಖ್ಯೆಗಳನ್ನು ಪ್ರತಿಸ್ಥಾಪಿಸತಕ್ಕದ್ದು.

**28.4.** **ಇಳಿಗಾಲುವೆಗಳನ್ನು ಒದಗಿಸುವುದು:** ಎಲ್ಲಾ ಬಹು ಅಂತಸ್ತು / ಎತ್ತರಿಸಿದ ವಾಸ ಮತ್ತು ವಾಣಿಜ್ಯ ಕಟ್ಟಡಗಳಲ್ಲಿ ಪ್ರತಿ ಅಂತಸ್ತಿನಲ್ಲಿಯೂ ಮತ್ತು ಕಟ್ಟಡದ ವಠಾರ / ಆವರಣಗಳಲ್ಲಿ ಕಸದ ಸಂಗ್ರಹಣೆಗಾಗಿ ಉಚ್ಛಿಸ್ಟ ಇಳಿಗಾಲುವೆಗಳನ್ನು ಒದಗಿಸತಕ್ಕದ್ದು ಅಂತಹ ಇಳಿಗಾಲುವೆಗಳನ್ನು ಮೆಟ್ಟಿಲು ಮತ್ತು ಲಿಫ್ಟ್‌ನಿಂದ ದೂರದಲ್ಲಿ ನೆಲೆಗೊಳಿಸತಕ್ಕದ್ದು ಮತ್ತು ಕಟ್ಟಡದ ಭಾಗದಲ್ಲಿ ನೆಲೆಗೊಳಿಸಬಾರದು.

**28.5.** **ಪತ್ರ ಅಥವಾ ಅಂಚೆ ಪೆಟ್ಟಿಗೆ ವ್ಯವಸ್ಥೆ:** ಎಲ್ಲ ಬಹು ಅಂತಸ್ತು / ಎತ್ತರಿಸಿದ ಕಟ್ಟಡಗಳಲ್ಲಿ ಅಂಚೆ ಅಧಿಕಾರಿಗಳ ಅಗತ್ಯಗಳಿಗೆ ಅನುಸಾರವಾಗಿ ಎಲ್ಲಾ ಬಹು ಅಂತಸ್ತು / ಎತ್ತರಿಸಿದ ವಾಸ ಮತ್ತು ವಾಣಿಜ್ಯ ಕಟ್ಟಡಗಳ ನೆಲ ಅಂತಸ್ತಿನಲ್ಲಿ ಸೂಕ್ತ ಅಳತೆಯ ಪತ್ರ / ಅಂಚೆಪೆಟ್ಟಿಗೆಯನ್ನು ಒದಗಿಸತಕ್ಕದ್ದು.

**28.6.** **ನಿರ್ಮಾಣದ ಆವರಣದಲ್ಲಿ ಸೌಲಭ್ಯಗಳು :–** ಅಂತಸ್ತು ನೆಲ ವಿಸ್ತೀರ್ಣವು 250 ಚ.ಮೀ ಗಿಂತಲೂ ಹೆಚ್ಚಾಗಿರುವ ಸಂದರ್ಭಗಳಲ್ಲಿ ನಿರ್ಮಾಣದ ಆವರಣದ ಒಳಗಡೆ ಕೆಲಸಗಾರರ ಉಪಯೋಗಕ್ಕಾಗಿ ತಾತ್ಕಾಲಿಕ ಶೌಚಗೃಹಗಳನ್ನು ನಿರ್ಮಿಸತಕ್ಕದ್ದು.

**29.0.** **ಸೌರಶಕ್ತಿಯಿಂದ ನೀರು ಕಾಯುವ ಅಗತ್ಯಗಳು –** ವಿವಿಧ ವರ್ಗಗಳ ಕಟ್ಟಡಗಳಿಗೆ ಕೋಷ್ಟಕ 17 ರ ಪ್ರಕಾರ ಸೌರಶಕ್ತಿಯಿಂದ ನೀರು ಕಾಯುವ ಯಂತ್ರಗಳ ಅಗತ್ಯಗಳನ್ನು ಒದಗಿಸತಕ್ಕದ್ದು.

**ಕೋಷ್ಟಕ–17**

**(ಉಪವಿಧಿ–29.0)**

**ಸೌರಶಕ್ತಿಯಿಂದ ಕಾಯುವ ಯಂತ್ರಗಳ ಅಗತ್ಯಗಳು**

| ಕ್ರಮ ಸಂಖ್ಯೆ | ಬಳಕೆಯ ರೀತಿ | ಪ್ರತಿದಿನಕ್ಕೆ 100 ಲೀಟರ್ ನಂತೆ ಪ್ರತಿ ಘಟಕಕ್ಕೆ ಒದಗಿಸತಕ್ಕದ್ದು. |
|---|---|---|
| 1 | ರೆಸ್ಟೋರೆಂಟ್, ಆಹಾರ ಮತ್ತುಪಾನೀಯಗಳನ್ನು ಒದಗಿಸುವ 100 ಚ.ಮೀ ಮೇಲ್ಪಟ್ಟ ಆಸನಗಳ ಸೇವಾ ಪ್ರದೇಶಗಳಿಗೆ. | 40 ಚ.ಮೀ ಆಸನ ಅಥವಾ ಸೇವಾ ಪ್ರದೇಶದ |
| 2 | ತಂಗುದಾಣಗಳು ಮತ್ತು ಪ್ರವಾಸಿ ನಿಲಯಗಳು | 3 ಕೊಠಡಿಗಳು. |
| 3 | ವಿದ್ಯಾರ್ಥಿ ನಿಲಯ ಮತ್ತು ಅತಿಥಿ ನಿಲಯಗಳು | 6 ಕೊಠಡಿಗಳು / ವ್ಯಕ್ತಿಗಳ ಸಾಮರ್ಥ್ಯಕ್ಕೆ. |
| 4 | ಕೈಗಾರಿಕಾ ಘಟಕಗಳ ಕ್ಯಾಂಟೀನ್‌ಗಳು | 50 ಜನ ಕೆಲಸಗಾರರು. |
| 5 | ನರ್ಸಿಂಗ್ ಹೋಂ ಮತ್ತು ಆಸ್ಪತ್ರೆಗಳು. | 4 ಹಾಸಿಗೆಗಳು. |
| 6 | ಕಲ್ಯಾಣ ಮಂದಿರಗಳು / ಸಮುದಾಯ ಭವನ / ಸಭಾಭವನ. (ಅಡಿಗೆ ಮನೆ ಮತ್ತು ಊಟದ ಭವನಗಳನ್ನೊಳಗೊಂಡ). | 30 ಚ.ಮೀ ಅಂತಸ್ತು ವಿಸ್ತೀರ್ಣ |
| 7 | ಮನರಂಜನಾ ಕ್ಲಬ್‌ಗಳು | 100 ಚ.ಮೀ ಅಂತಸ್ತು ವಿಸ್ತೀರ್ಣ |
| 8 | ವಾಸದ ಕಟ್ಟಡಗಳು<br>ಎ). 200 ಚ.ಮೀ ಅಂತಸ್ತು ವಿಸ್ತೀರ್ಣ ಹೊಂದಿರುವ ಪ್ರತಿ ಏಕ ಕುಟುಂಬ ಘಟಕ ಅಥವಾ ಪ್ರತಿ 400 ಚ.ಮೀಗಿಂತಲೂ ಹೆಚ್ಚಿನ ನಿವೇಶನದ ವಿಸ್ತೀರ್ಣದ ಇವುಗಳಲ್ಲಿ ಯಾವುದು ಕಡಿಮೆಯೋ ಅದಕ್ಕೆ.<br>ಬಿ). ಬಹು ನಿವಾಸಿ ಘಟಕ / ಅಪಾರ್ಟ್‌ಮೆಂಟ್‌ಗಳಲ್ಲಿ ಪ್ರತಿ 5 ಘಟಕಗಳು ಮತ್ತು ಅದರ ಭಾಗಗಳಿಗೆ ಪ್ರತಿ ದಿನಕ್ಕೆ 500 ಲೀಟರ್‌ನಂತೆ | ---- |
| 9 | ಬಹು ನಿವಾಸಿ ಘಟಕಗಳ (5 ಘಟಕಗಳಿಗಿಂತಲೂ ಹೆಚ್ಚಿನ)ವಾಸದ ಕಟ್ಟಡಗಳಲ್ಲಿ ನಡುಜಾಗಗಳು, ವಾಹನಗಳು ಚಲಿಸುವ ಮಾರ್ಗಗಳು ಮತ್ತು ಒಳಮೊಗಸಾಲೆಗಳಿಗೆ ಸೌರಶಕ್ತಿಯಿಂದ ಬೆಳಕು ನೀಡುವ ಪದ್ಧತಿಯನ್ನು ವ್ಯವಸ್ಥೆಗೊಳಿಸ ತಕ್ಕದ್ದು. | ---- |

**30.0. ಕಟ್ಟಡನಿರ್ಮಾಣದಲ್ಲಿ ಭೂಕಂಪನದ ಪರಿಣಾಮಗಳನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಸಂರಕ್ಷಣೆ ಕ್ರಮಗಳು:–**
ನೆಲ ಅಂತಸ್ತಿನೊಂದಿಗೆ ನಾಲ್ಕು ಅಂತಸ್ತುಗಳು ಮತ್ತು ಅದಕ್ಕಿಂತಲೂ ಹೆಚ್ಚಿನ ಅಂತಸ್ತುಗಳನ್ನೊಳಗೊಂಡ ಅಥವಾ 15.00 ಮೀ ಮತ್ತು ಅದಕ್ಕಿಂತಲೂ ಹೆಚ್ಚು ಎತ್ತರವಿರುವ ಕಟ್ಟಡಗಳನ್ನು ರಾಷ್ಟ್ರೀಯ ಕಟ್ಟಡ ಸಂಹಿತೆಗೆ ಮತ್ತು ಬ್ಯೂರೋ ಆಫ್ ಇಂಡಿಯನ್ಸ್ ಸ್ಟ್ಯಾಂಡರ್ಡ್ ಸಂಸ್ಥೆಯಿಂದ ಪ್ರಕಟಣೆ ಸಂಖ್ಯೆ ಐ.ಎಸ್.1893 - 2002 ಇದರ ಮೂಲಕ ಪ್ರಕಟವಾಗಿರುವ "ಕ್ರೈಟಿರಿಯ ಫಾರ್ ಅರ್ತ್‌ಕ್ವೆಕ್ ರೆಸ್ಸಿಸ್ಟೆಂಟ್ ಡಿಸೈನ್ ಆಫ್ ಸ್ಟ್ರಕ್ಚರ್ಸ್" ಪ್ರಕಟಣೆಯ ಆದರ್ಶಗಳಿಗೆ ಅನುಗುಣವಾಗಿ ನಿರ್ಮಿಸತಕ್ಕದ್ದು. ಭೂ ಕಂಪನದಿಂದಾಗುವ ಪರಿಣಾಮಗಳನ್ನು ತಡೆಗಟ್ಟುವ ಸಾಮರ್ಥ್ಯ ಹೊಂದುವಂತೆ ಕಟ್ಟಡದ ರಚನೆ ಮತ್ತು ನಿರ್ಮಾಣದಲ್ಲಿ ರಾಷ್ಟ್ರೀಯ ಕಟ್ಟಡ ಸಂಹಿತೆಯ ಮತ್ತು ಐ.ಎಸ್. 1893 –2002 ಪ್ರಕಟಣೆಯ ಆದರ್ಶಗಳನ್ನು ಅನುಸರಿಸಿರುವುದಾಗಿ ಕಟ್ಟಡ ಮೇಲ್ವಿಚಾರಣೆ ಮತ್ತು ಕಾರ್ಯಪೂರ್ಣತಾ ನಮೂನೆಗಳಲ್ಲಿ ನೊಂದಾಯಿತ ಇಂಜಿನಿಯರರು / ವಾಸ್ತು ಶಿಲ್ಪಿಗಳು ದಾಖಲು ಮಾಡಿರುವ ಪ್ರಮಾಣ ಪತ್ರವನ್ನು ಒಳಗೊಂಡಿರ ತಕ್ಕದ್ದು.

**31.0. ಅಂಗವಿಕಲ ವ್ಯಕ್ತಿಗಳಿಗಾಗಿ ಸೌಲಭ್ಯಗಳು:–** ಅಂಗವಿಕಲ ವ್ಯಕ್ತಿಗಳಿಗೆ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ 300 ಚ.ಮೀ ಮತ್ತು ಅದಕ್ಕಿಂತಲೂ ಹೆಚ್ಚಿನ ಆವೃತ ಪ್ರದೇಶವನ್ನು ಹೊಂದಿರುವ ಸಾರ್ವಜನಿಕ ಮತ್ತು ಅರೆಸಾರ್ವಜನಿಕ ಕಟ್ಟಡಗಳನ್ನು ಅನುಸೂಚಿ XI ರಲ್ಲಿ ಗೊತ್ತುಪಡಿಸಿರುವ ವಿಧಾನಗಳಂತೆ ಯೋಜಿಸ ತಕ್ಕದ್ದು, ಮತ್ತು ನಿರ್ಮಿಸತಕ್ಕದ್ದು.

**32.0. ಮಳೆ ನೀರಿನ ಸಂಗ್ರಹಣೆ**

ಎ) 100 ಚ.ಮೀ ಮೀರಿದ ಮೇಲುಪಾಯ ಕ್ಷೇತ್ರವನ್ನು ಹೊಂದಿರುವ ಪ್ರತಿಯೊಂದು ಕಟ್ಟಡದ ಮತ್ತು 200 ಚ.ಮೀಗಿಂತಲೂ ಕಡಿಮೆ ಕ್ಷೇತ್ರ ಹೊಂದಿಲ್ಲದ ನಿವೇಶನಗಳಲ್ಲಿ ನಿರ್ಮಿಸಿರುವ ಪ್ರತಿ ಕಟ್ಟಡವು ಅನುಸೂಚಿ XII ರಲ್ಲಿ ಒಟ್ಟು ಸಾಮರ್ಥ್ಯಕ್ಕೆ ರಚಿಸಿರುವ ಒಂದು ಅಥವಾ ಹೆಚ್ಚಿನ ಮಳೆ ನೀರು ಸಂಗ್ರಹಣೆಯ ನಿರ್ಮಾಣಗಳನ್ನು ಹೊಂದಿರ ತಕ್ಕದ್ದು.
ಪರಂತು ಪ್ರತಿ ಸಂದರ್ಭದಲ್ಲಿಯೂ ಕನಿಷ್ಟ ಪ್ರಮಾಣದ ಮಳೆ ನೀರು ಸಂಗ್ರಹಣೆಯ ಭರವಸಗೆ ಒಳಪಟ್ಟಂತೆ ಅನುಸೂಚಿ XII ರಲ್ಲಿ ನಮೂದಿಸಿರುವ ನಿರ್ಮಾಣಗಳಿಗಿಂತಲೂ ಭಿನ್ನವಾದ ನಿರ್ಮಾಣಗಳನ್ನು ಪ್ರಾಧಿಕಾರವು ಅನುಮೋದಿಸ ಬಹುದು.

ಬಿ) ಉಪವಿಧಿ 32 (ಎ) ರಲ್ಲಿ ನಮೂದಿಸಿರುವ ಪ್ರತಿ ಕಟ್ಟಡದ ಮಾಲೀಕರು ಕುಡಿಯುವ ಉದ್ದೇಶದ ಹೊರತಾಗಿ ಇತರೆ ಉದ್ದೇಶಗಳ ನೀರಿನ ಶೇಖರಣೆಗಾಗಿ ಅಥವಾ ಅಂತರ್ ಜಲದ ಪುನರ್ ವೃದ್ಧಿಗಾಗಿ, ಎಲ್ಲಾ ಸಂದರ್ಭಗಳಲ್ಲಿಯೂ ಮಳೆ ನೀರು ಸಂಗ್ರಹಣೆಯ ನಿರ್ಮಾಣಗಳನ್ನು ಸುಸ್ಥಿತಿಯಲ್ಲಿ ಸಂರಕ್ಷಿಸುವುದಾಗಿ ಭರವಸೆ ನೀಡತಕ್ಕದ್ದು.

ಸಿ) ಈ ಉಪವಿಧಿಗಳಲ್ಲಿ ನಿಗದಿ ಪಡಿಸಿರುವ ಮಳೆ ನೀರು ಸಂಗ್ರಹಣೆಯ ನಿರ್ಮಾಣಗಳನ್ನು ಒದಗಿಸಲು ಅಥವಾ ನಿರ್ವಹಣೆ ಮಾಡಲು ಉಪವಿಧಿ 32 (ಎ)ರಲ್ಲಿ ನಮೂದಿಸಿರುವ ಯಾವುದೇ ಕಟ್ಟಡದ ಮಾಲೀಕರ ವಿಫಲತೆಯಿಂದಾಗಿ ಕಟ್ಟಡ ನಿರ್ಮಾಣದ ಪ್ರತಿ 100 ಚ.ಮೀ ವಿಸ್ತೀರ್ಣಕ್ಕೆ ವಾರ್ಷಿಕ ಒಂದು ಸಾವಿರ ರೂಪಾಯಿಗೆ ಹೆಚ್ಚಿಲ್ಲದಂತೆ ಪ್ರಾಧಿಕಾರವು ಜುಲ್ಮಾನೆಯನ್ನು ವಿಧಿಸಬಹುದು.

## ಭಾಗ–V
## ಸಂಕೀರ್ಣ

**33.0. ಸಾರ್ವಜನಿಕ ಆಸ್ತಿಯ ಮೇಲೆ ನಿರ್ಮಾಣಗಳ ನಿಷೇಧ:–**

**33.1. ಚರಂಡಿಗಳ ಮೇಲೆ ನಿರ್ಮಾಣ –** ಯಾವುದೇ ಕಟ್ಟಡವನ್ನಾಗಲಿ ಅಥವಾ ಅದರ ಭಾಗವನ್ನಾಗಲಿ ಮೋರಿಗಳು ಒಳಚರಂಡಿ ಮಾರ್ಗಗಳು ನೀರಿನ ಜೋಡಣೆ ಅಥವಾ ಅಂತರ್‌ಗತ ವಿದ್ಯುತ್ ಮಾರ್ಗ ಅಥವಾ ಇಂತಹ ಸಾರ್ವಜನಿಕ ಆಸ್ತಿಯ ಮೇಲೆ ನಿರ್ಮಿಸಬಾರದು.

**33.2. ಕಿಟಿಕಿ, ಬಾಗಿಲು ಮುಂತಾದವುಗಳ ಹೊರಚಾಚು :–**

(i) ಯಾವುದೇ ವ್ಯಕ್ತಿಯು ಯಾವುದೇ ರಸ್ತೆ, ಪಾದಚಾರಿ ಮಾರ್ಗ ಮೋರಿ ಅಥವಾ ಬದಿಯ ಜಮೀನುಗಳಲ್ಲಿ ಅಥವಾ ಅದರ ಮೇಲ್ಭಾಗದಲ್ಲಿ ಯಾವುದೇ ಗೋಡೆಯನ್ನು ನಿರ್ಮಿಸ ಬಾರದು ಅಥವಾ ಬೇಲಿಯನ್ನು ಹಾಕಬಾರದು ಅಥವಾ ಇತರೆ ಅಡೆ ತಡೆ ಅಥವಾ ಹೊರ ಚಾಚುವಿಕೆ ಅಥವಾ ಯಾವುದೇ ಒತ್ತುವರಿಯನ್ನು ಮಾಡಬಾರದು.

(ii) ಯಾವುದೇ ಬಾಗಿಲು, ಗೇಟು, ಕಿಟಕಿಗಳು ಅಥವಾ ಹೊರಚಾಚಿರುವ ನಿರ್ಮಾಣಗಳನ್ನು ಯಾವುದೇ ರಸ್ತೆ ಅಥವಾ ಸಾರ್ವಜನಿಕ ಉಪಯುಕ್ತತೆ ಜಾಗ ಅಥವಾ ಸಾರ್ವಜನಿಕ ಆಸ್ತಿಯ ಕಡೆಗೆ ಜೋತು ಬೀಳಿಸ ತಕ್ಕದ್ದಲ್ಲ ಅಥವಾ ಹೊರಗೆ ತೆರೆದುಕೊಳ್ಳುವಂತೆ ಮುಂಚಾಚುವಂತೆ ಅಳವಡಿಸ ತಕ್ಕದ್ದಲ್ಲ.

**34.0. ನಿರಸನ ಮತ್ತು ಉಳಿತಾಯಗಳು:–**
ಈ ಉಪವಿಧಿಗಳು ಜಾರಿಗೆ ಬಂದ ಕ್ಷಣದಿಂದ ಬೆಂಗಳೂರು ನಗರ ಮುನಿಸಿಪಲ್ ಕಾರ್ಪೊರೇಷನ್ ಕಟ್ಟಡ ಉಪವಿಧಿಗಳು, 1983 (ಆದೇಶ ಸಂಖ್ಯೆ ಹೆಚ್.ಯೂ.ಡಿ.–19 ಎಲ್.ಆರ್.ಬಿ.–80 ದಿನಾಂಕ: 10-08-1983 ಇದರಲ್ಲಿ ಸರ್ಕಾರದಿಂದ ಅನುಮೋದನೆ ಪಡೆದಿರುವ ಯಥಾ ಸ್ಥಾನದಲ್ಲಿ ನಿರಸನ ಗೊಳ್ಳತಕ್ಕದ್ದು,

ಪರಂತು ಈ ನಿರಸನವು

ಎ) ಸದರಿ ಉಪವಿಧಿಗಳ ಹಿಂದಿನ ಕ್ರಿಯೇ ಅಥವಾ ಅದರ ಅಡಿಯಲ್ಲೇ ಕೈಗೊಂಡ ಯಾವುದೇ ಕ್ರಮ ಅಥವಾ ಅನುಭವಿಸದ ತೊಂದರೆ ಅಥವಾ,

ಬಿ) ಸದರಿ ಉಪವಿಧಿಗಳ ಅಡಿಯಲ್ಲಿ ಸ್ವಾಧೀನಗೊಂಡ ಅಥವಾ ಅಧಿಕಗೊಂಡ ಅಥವಾ ಗುರಿಯಾದ ಯಾವುದೇ ಹಕ್ಕು, ಸೌಕರ್ಯ, ಒಪ್ಪಂದ, ಅಥವಾ ಹೊಣೆ ಅಥವಾ,

ಸಿ) ಸದರಿ ಉಪವಿಧಿಗಳಿಗೆ ವಿರುದ್ಧವಾಗಿ ಮಾಡಿದ ಯಾವುದೇ ಅಪರಾಧಕ್ಕೆ ಯಾವುದೇ ಜುಲ್ಮಾನೆ ಮುಟ್ಟುಗೋಲು ಅಥವಾ ಶಿಕ್ಷೆ ಅಥವಾ,

ಡಿ) ಮೇಲೆ ಉಲ್ಲೇಖಿಸಿದ ತನಿಖೆ, ಹಕ್ಕು, ಸೌಕರ್ಯ, ಒಪ್ಪಂದ, ಹೊಣೆ, ಮುಟ್ಟುಗೋಲು ಅಥವಾ ಶಿಕ್ಷೆಯ ಬಗೆಗಿನ ಕಾನೂನು ಕ್ರಮ ಅಥವಾ ಪರಿಹಾರ. ಇವುಗಳ ಮೇಲೆ ಪರಿಣಾಮ ಬೀರುವುದಿಲ್ಲ ಮತ್ತು ಉಪವಿಧಿಗಳು ಜಾರಿಗೆ ಬಂದಿಲ್ಲವೆಂದು ಪರಿಗಣಿಸಿ ಯಾವುದೇ ತನಿಖೆಯನ್ನಾಗಲೀ ಕಾನೂನು ಕ್ರಮವನ್ನಾಗಲೀ ಅಥವಾ ಪರಿಹಾರವನ್ನಾಗಲಿ ನಡೆಸಲು ಆರಂಭಿಸಬಹುದು, ಅಥವಾ ಮುಂದುವರಿಸಬಹುದು ಅಥವಾ ಜಾರಿಗೊಳಿಸ ಬಹುದು ಮತ್ತು ಯಾವುದೇ ಜುಲ್ಮಾನೆ , ಕ್ರಮ, ಮುಟ್ಟುಗೋಲು ಅಥವಾ ಶಿಕ್ಷೆಯನ್ನು ವಿಧಿಸ ಬಹುದು.

ಇದಲ್ಲದೇ ಸದರಿ ಉಪವಿಧಿಗಳ ಅಡಿಯಲ್ಲಿ ಮಂಜೂರು ಮೊದಲಾದ ಪ್ರಮಾಣ ಪತ್ರ ಅನುಮತಿ ಅಥವಾ ಪರವಾನಿಗೆಯು ಈ ಉಪವಿಧಿಗಳ ಅಡಿಯಲ್ಲಿ ಕೈಗೊಳ್ಳಲಾದ ಯಾವುದೇ ಕಾರ್ಯ ಅಥವಾ ಯಾವುದೇ ಕ್ರಮದಿಂದ ಅಮಾನತ್ತುಗೊಳಿಸಲ್ಪಡದೇ ಇದ್ದಲ್ಲಿ ಮತ್ತು ಅಮಾನತ್ತು ಗೊಳಿಸುವ ವರೆವಿಗೂ ಯಥಾ ರೀತಿಯಲ್ಲಿ ಜಾರಿಯಲ್ಲಿದ್ದು ಮುಂದುವರಿಯ ತಕ್ಕದ್ದು.

## ಅನುಸೂಚಿ–I

(ಉಪವಿಧಿ ಸಂಖ್ಯೆ–2.55)

### ಭೂ ಉಪಯೋಗಗಳ ವರ್ಗೀಕರಣ ಮತ್ತು ಅನುಮತಿಸಲಾದ ಉಪಯೋಗಗಳು (ಅಥವಾ ಅಧಿಭೋಗಗಳು)

**1.1 ಭೂ ಉಪಯೋಗ ವಲಯದ ವರ್ಗೀಕರಣ:**

(ಎ) ವಸತಿ

(ಬಿ) ವಾಣಿಜ್ಯ (ಚಿಲ್ಲರೆ ಮತ್ತು ಸಗಟು ವ್ಯಾಪಾರ)

(ಸಿ) ಕೈಗಾರಿಕೆ (ಲಘು ಹಾಗೂ ಸೇವಾ ಕೈಗಾರಿಕೆಗಳು ಮಧ್ಯಮ ಕೈಗಾರಿಕೆಗಳು ಮತ್ತು ಭಾರಿ ಕೈಗಾರಿಕೆಗಳು)

(ಡಿ) ಸಾರ್ವಜನಿಕ ಮತ್ತು ಅರೆಸಾರ್ವಜನಿಕ

(ಇ) ಉದ್ಯಾನ ವನಗಳು, ಬಯಲುಜಾಗಗಳು ಆಟದ ಮತ್ತು ಮೈದಾನಗಳು

(ಎಫ್) ಸಾರಿಗೆ ಮತ್ತು ಸಂಪರ್ಕ.

(ಜಿ) ಉಪಯುಕ್ತತೆಗಳು ಮತ್ತು ಸೇವೆಗಳು

(ಹೆಚ್) ವ್ಯವಸಾಯದ ವಲಯ

**1.2** ವಿವಿಧ ವಲಯಗಳಲ್ಲಿ ಮಹಾನಗರ ಪಾಲಿಕೆಯು ಅನುಮತಿಸಬಹುದಾದ ಭೂ ಉಪಯೋಗಗಳನ್ನು ಮತ್ತು ಬೆಂಗಳೂರು ಅಭಿವೃಧಿ ಪ್ರಾಧಿಕಾರವು ಯೋಜನಾ ಪ್ರಾಧಿಕಾರದಂತೆ ವಿಶೇಷ ಸಂದರ್ಭಗಳಲ್ಲಿ ಅನುಮತಿಸ ಬಹುದಾದ ಭೂ ಉಪಯೋಗಗಳನ್ನು 1.2.1. ರಿಂದ 1.2.8.ರ ವರೆಗಿನ ಪರಿಚ್ಛೇದಗಳಲ್ಲಿ ನಮೂದಿಸಲಾಗಿದೆ.

**1.2.1. ವಸತಿ ವಲಯ:**

(ಎ) **ಅನುಮತಿಸಬಹುದಾದ ಉಪಯೋಗಗಳು** : ನಿವಾಸಗಳು, ಕೆಲಸ ಮಾಡುವ ಮಹಿಳಾ ಮತ್ತು ಪುರುಷ ಹಾಸ್ಟೆಲ್‌ಗಳು ಸೇರಿದಂತೆ ಹಾಸ್ಟೆಲ್‌ಗಳು, ಧರ್ಮಶಾಲೆಗಳು, ಸಾರ್ವಜನಿಕ ಪೂಜಾ ಸ್ಥಳಗಳು, ಸೆಕೆಂಡರಿ ಶಿಕ್ಷಣದವರೆಗೆ ಸಾಮಾನ್ಯ ಶಿಕ್ಷಣ ನೀಡುವ ಶಾಲೆಗಳು, ಸಾರ್ವಜನಿಕ ಗ್ರಂಥಾಲಯಗಳು, ಅಂಚೆ ಮತ್ತು ತಂತಿ ಕಛೇರಿಗಳು, ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣಾ ನಿಗಮದ ಕೌಂಟರ್‌ಗಳು, ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಯ ಕೌಂಟರ್‌ಗಳು, ಕ್ಲಬ್‌ಗಳು, ಅರೆಸಾರ್ವಜನಿಕ ಮನರಂಜನಾ ಉಪಯೋಗಗಳು, ಹಾಲಿನ ಬೂತುಗಳು 20.00 ಚ.ಮೀ ಗಿಂತ ಹೆಚ್ಚು ಅಂತಸ್ತು ವಿಸ್ತೀರ್ಣ ಹೊಂದಿಲ್ಲದ ನೆರಹೊರೆ ಅಥವಾ ಸಮುಚಿತ ಅಂಗಡಿಗಳು; 20 ಚ.ಮೀ ಗಿಂತ ಹೆಚ್ಚು ಅಂತಸ್ತು ವಿಸ್ತೀರ್ಣ ಹೊಂದಿಲ್ಲದ ಸಾರ್ವಜನಿಕ ಉಪಯೋಗದ ವೈದ್ಯರ ಸಲಹಾ ಕೊಠಡಿಗಳು, ವಕೀಲರ ಕಛೇರಿಗಳು, ಮತ್ತು ಇತರ ವೃತ್ತಿಪರ ಕಛೇರಿಗಳು;

(ಬಿ) **ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ನಗರಪಾಲಿಕೆ, ಶಾಸನಾತ್ಮಕ ಪ್ರಾಧಿಕಾರ, ಕೇಂದ್ರ ಮತ್ತು ರಾಜ್ಯ ಸರ್ಕಾರದ ಕಛೇರಿಗಳು, ಬ್ಯಾಂಕುಗಳು, ಸಾರ್ವಜನಿಕ ಉಪಯುಕ್ತ ಕಟ್ಟಡಗಳು, ಕಾಲೇಜುಗಳು, ಸಮಾಧಿ ಭೂಮಿ, ಗಾಲ್ಫ್ ಕ್ಲಬ್ಬುಗಳು, ಟೈಲರಿಂಗ್, ದೋಭಿಖಾನೆ, ಮಾನಸಿಕ ಚಿಕಿತ್ಸೆಗಳನ್ನು ಹೊರತುಪಡಿಸಿ ಮನುಷ್ಯ ಪಾಲನಾ ಆಸ್ಪತ್ರೆಗಳು, ನರ್ಸಿಂಗ್ ಹೋಮ್‌ಗಳು, ಜನಹಿತ ಉಪಯೋಗಗಳು, ಇಂಧನ ದಾಸ್ತಾನು ಡಿಪೋಗಳು, ಇಂಧನ ತುಂಬುವ ಕೇಂದ್ರಗಳು, ಹಲ್ಲರ್ ಮತ್ತು ಹಿಟ್ಟಿನ ಗಿರಣಿಗಳು, ಸೇವಾ ಕೈಗಾರಿಕೆಗಳನ್ನು ಒಳಗೊಂಡಂತೆ ಕಾಫಿಪುಡಿ ಬೀಸುವ ಯಂತ್ರಗಳು, ಅನುಸೂಚಿ I'ಎ' ರಲ್ಲಿ ನೀಡಿರುವ ಪಟ್ಟಿಯಂತೆ 5 ಅಶ್ವಶಕ್ತಿ ಗರಿಷ್ಠ ವಿದ್ಯುತ್ ಬಳಕೆ ಹೊಂದಿರುವ; ಹಲ್ಲರ್ ಮತ್ತು ಹಿಟ್ಟಿನ ಗಿರಣಿಗಳ ಸಂದರ್ಭದಲ್ಲಿ 10 ಅಶ್ವಶಕ್ತಿ ಗರಿಷ್ಠ ವಿದ್ಯುತ್ ಬಳಕೆ ಹೊಂದಿರುವ ಎಲ್ಲಾ ಕೈಗಾರಿಕೆಗಳು. ಮೇಲೆ ತಿಳಿಸಿರುವ ಅಶ್ವಶಕ್ತಿಯನ್ನು ಲೆಕ್ಕ ಹಾಕುವಾಗ ಏರ್‌ಕಂಡೀಷನರ್, ಲಿಫ್ಟ್ ಮತ್ತು ಕಂಪ್ಯೂಟರ್‌ಗಳಿಗೆ ಬೇಕಾದ ವಿದ್ಯುತ್ತನ್ನು ಬಿಟ್ಟು ಲೆಕ್ಕ ಹಾಕತಕ್ಕದ್ದು.

**1.2.1. ವಾಣಿಜ್ಯ (ಚಿಲ್ಲರೆ ವ್ಯಾಪಾರ) ವಲಯ:**

**1.2.2.1 ಅನುಮತಿಸಬಹುದಾದ ಉಪಯೋಗಗಳು:** ಪ್ರಸಕ್ತ ಕಟ್ಟಡ ಉಪವಿಧಿಗಳಿಗನುಗುಣವಾಗಿರುವ ಕಛೇರಿಗಳು, ವಸತಿ ಕಟ್ಟಡಗಳು, ಅಂಗಡಿಗಳು ಹಾಗೂ ಕ್ಷೌರಿಕರು, ದರ್ಜಿಗಳು, ದೋಭಿಗಳು, ಡ್ರೈಕ್ಲೀನ್ ಅಂಗಡಿ, ಹೋಟೆಲುಗಳು, ಕ್ಲಬ್ಬುಗಳು, ವರ್ತಮಾನ

ಪತ್ರಿಕೆ ಅಥವಾ ಮುದ್ರಣ ಕಛೇರಿಗಳು (ಜಾಬ್ ಪ್ರಿಂಟಿಂಗ್), ಮನರಂಜನಾ ಸ್ಥಳಗಳು ಅಥವಾ ಸಭೆಗಳು ಸಮುದಾಯ ಭವನಗಳು, ಸಭೆ ಕೇಂದ್ರಗಳು, ವಸ್ತು ಪ್ರದರ್ಶನಾಲಯಗಳು, ರೆಸ್ಟೋರೆಂಟುಗಳು, ಜಾಹೀರಾತು ಚಿಹ್ನೆ, ಚರ್ಚುಗಳು, ದೇವಸ್ಥಾನಗಳು ಹಾಗೂ ಇತರ ಸಾರ್ವಜನಿಕ ಪೂಜಾಗೃಹಗಳು, ಶಾಲೆಗಳು ಕಾಲೇಜುಗಳು ಮತ್ತು ಇತರ ಸಂಸ್ಥೆಗಳು, ಗ್ರಂಥಾಲಯಗಳು, ನಗರಪಾಲಿಕೆ, ರಾಜ್ಯ ಅಥವಾ ಕೇಂದ್ರ ಸರ್ಕಾರದ ಕಛೇರಿಗಳು, ಯಾವುದೇ ಚಿಲ್ಲರೆ ವ್ಯಾಪಾರ ಅಥವಾ ಅನುಸೂಚಿ I'ಎ' ರಲ್ಲಿ ಪಟ್ಟಿ ಮಾಡಿರುವ ಸೇವಾ ಕೈಗಾರಿಕೆಗಳು (ಮುಖ್ಯ ವ್ಯಾಪಾರದ ಕೇಂದ್ರಗಳಲ್ಲಿ 10 ಅಶ್ವಶಕ್ತಿಯ ವರೆಗೆ ಮತ್ತು ನೆರೆಹೊರೆ ಅಂಗಡಿಗಳು, ನರ್ಸಿಂಗ್ ಹೋಂ ಮತ್ತು ವಸತಿ ಕಟ್ಟಡಗಳಲ್ಲಿ 5 ಅಶ್ವಶಕ್ತಿಯ ವರೆವಿಗೆ) ಸರಕು ಸಾಮಗ್ರಿ ಮಳಿಗೆಗಳು, ಕಲ್ಯಾಣ ಮಂಟಪಗಳು, ಬ್ಯಾಂಕ್‌ಗಳು, ಚಿತ್ರಮಂದಿರಗಳು, ಹವಾನಿಯಂತ್ರಣ, ಲಿಫ್ಟ್ ಮತ್ತು ಕಂಪ್ಯೂಟರ್‌ಗಳಿಗಾಗಿ ಅಶ್ವಶಕ್ತಿಯನ್ನು ಲೆಕ್ಕಹಾಕತಕ್ಕದ್ದಲ್ಲ.

**1.2.2.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** 10 ಜನಕ್ಕಿಂತಲೂ ಹೆಚ್ಚು ಕಾರ್ಮಿಕರನ್ನು ನೇಮಿಸಿಕೊಂಡಿರದ ಮತ್ತು ಮುಖ್ಯ ವ್ಯಾಪಾರ ಕೇಂದ್ರ ಮತ್ತು ವಿಭಾಗ ವ್ಯಾಪಾರ ಕೇಂದ್ರಗಳಲ್ಲಿ 20 ಅಶ್ವಶಕ್ತಿಗೂ ಹೆಚ್ಚು ಉತ್ಪಾದನಾ ಘಟಕಗಳನ್ನು ಹೊಂದಿಲ್ಲದ ಕೈಗಾರಿಕಾ ಸೇವಾ ಕೇಂದ್ರಗಳು, ಆಟೋಮೋಬೈಲ್ ಕಾರ್ಯಾಗಾರಗಳು, ಗ್ಯಾರೇಜುಗಳು, ದಾಸ್ತಾನು ಮಳಿಗೆಗಳು ಮತ್ತು ವಿಶೇಷವಾಗಿ ನಿಷೇಧಿಸಲ್ಪಟ್ಟಿದ್ದನ್ನು ಹೊರತುಪಡಿಸಿ ವಾಸದ ವಲಯದಲ್ಲಿ ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು.

**1.2.3 ವಾಣಿಜ್ಯ (ಸಗಟು ವ್ಯಾಪಾರ) ವಲಯ:**

**1.2.3.1 ಅನುಮತಿಸ ಬಹುದಾದ ಉಪಯೋಗಗಳು:** ವಸತಿ ಕಟ್ಟಡಗಳನ್ನು ಹೊರತು ಪಡಿಸಿ ಚಿಲ್ಲರೆ ವ್ಯಾಪಾರ ವಲಯದ ವಿಷಯದಲ್ಲಿ ಇರುವಂತೆ 20 ಅಶ್ವಶಕ್ತಿಗೆ ಮೀರದಂತೆ ಸೇವಾ ಕೈಗಾರಿಕೆಗಳು.

**1.2.3.2 ವಿಶೇಷಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಚಿಲ್ಲರೆ ವ್ಯಾಪಾರ ವಲಯದಲ್ಲಿರುವಂತೆ 50 ಅಶ್ವಶಕ್ತಿ ವಿದ್ಯುತ್ ಬಳಕೆಯವರೆವಿಗೆ (ವಾಸ ಸ್ಥಳ ಮತ್ತು ಆಸ್ಪತ್ರೆಗಳನ್ನು ಹೊರತುಪಡಿಸಿ) ದಹ್ಯೇತರ ಸಾಮಾಗ್ರಿಗಳ ದಾಸ್ತಾನು ಮಳಿಗೆಗಳು, ಜಂಕ್‌ಯಾರ್ಡ್, ಟ್ರಕ್‌ಟರ್ಮಿನಲ್ ಮತ್ತು ಟ್ರಕ್‌ನಿಲುಗಡೆ ಸ್ಥಳಗಳು.

**1.2.4 ಲಘು ಕೈಗಾರಿಕಾ ವಲಯ:**

**1.2.4.1 ಅನುಮತಿಸಬಹುದಾದ ಉಪಯೋಗಗಳು:** ಅನುಸೂಚಿ I-ಬಿ ನಿರೂಪಣಾ ಪಟ್ಟಿಯಲ್ಲಿ ನಮೂದಿಸಲಾಗಿರುವ ನಿರ್ವಹಣಾ ಮಟ್ಟಕ್ಕೆ ಅನುಗುಣವಾಗಿರುವ ವಿದ್ಯುತ್ ಸಂಪರ್ಕ ಹೊಂದಿರಲಿ ಅಥವಾ ಇಲ್ಲದಿರಲಿ 50 ಜನಕ್ಕಿಂತಲೂ ಹೆಚ್ಚು ಕಾರ್ಮಿಕರನ್ನು ನೇಮಿಸದೆ ಇರುವ, ಒಟ್ಟು 25 ಅಶ್ವಶಕ್ತಿ ಗಿಂತಲೂ ಹೆಚ್ಚು ವಿದ್ಯುತ್ ಸಂಪರ್ಕವಿಲ್ಲದಿರುವ, ಸುರಕ್ಷಿತ ದಾಸ್ತಾನು ವ್ಯವಸ್ಥೆಯಿರುವ ಹಾಗೂ ಹೆಚ್ಚಿಗೆ ಅಪಾಯಕಾರಕ ಅಥವಾ ಅತಿ ಹಾನಿಕರ ಹೊಗೆ, ವಾಸನೆ, ಧೂಳು, ಕೊಳಚೆ ಪದಾರ್ಥಗಳನ್ನು ಹೊರಸೂಸದಿರುವಂಥ ಅಥವಾ ಇತರ ಆಕ್ಷೇಪಣಾರ್ಹ ಪರಿಸ್ಥಿತಿಗಳನ್ನು ಉಂಟುಮಾಡದಂಥ ಕೈಗಾರಿಕೆಗಳು, ಸಾರ್ವಜನಿಕ ಉಪಯುಕ್ತತೆಗಳಾದ ಒಳಚರಂಡಿ, ಅನುಪಯುಕ್ತ ವಸ್ತುಗಳ ವಿಲೇವಾರಿ ಯಂತ್ರಗಳು ಮತ್ತು ಸಂಬಂಧಿಸಿದ ಕಟ್ಟಡಗಳು; ವಾಹನ ನಿಲ್ದಾಣಗಳು, ಸರಕು ತುಂಬುವ ಹಾಗೂ ಇಳಿಸುವ ಅವಶ್ಯಕತೆಗಳನ್ನು ಎಲ್ಲ ಉಪಯೋಗಗಳಿಗೆ ಒದಗಿಸಬೇಕು. ಬಸ್ಸು ಹಾಗೂ ಟ್ರಕ್ಕುಗಳ ನಿಲ್ದಾಣಗಳು, ಪೆಟ್ರೋಲ್ ತುಂಬುವ ಕೇಂದ್ರಗಳು, ಟ್ಯಾಕ್ಸಿ ಹಾಗೂ ಸ್ಕೂಟರುಗಳ ನಿಲ್ದಾಣಗಳು, ಒಬ್ಬ ಮ್ಯಾನೇಜರ್ ಮತ್ತು ಪಹರೆ ಸಿಬ್ಬಂದಿಗಾಗಿ 240.00 ಚ.ಮೀ. ಮೀರದ ಅಥವಾ ಒಟ್ಟು ಪ್ರದೇಶದ ಶೇಕಡ 10ರಷ್ಟು. ಇದರಲ್ಲಿ ಯಾವುದು ಕಡಿಮೆಯೋ ಅಂತಹ ಕ್ಷೇತ್ರ ಹೊಂದಿರುವ ವಾಸದಮನೆ, ಕ್ಯಾಂಟೀನು ಮತ್ತು ಮನರಂಜನಾ ಸೌಲಭ್ಯಗಳು, ಕಲ್ಯಾಣ ಮಂಟಪಗಳು, ಕಛೇರಿಗಳು, ಅಂಗಡಿಗಳು, ಕ್ಲಬ್ಬುಗಳು, ಜಾಬ್ ಮುದ್ರಣಾಲಯಗಳು, ಬ್ಯಾಂಕುಗಳು, ರೆಸ್ಟೋರೆಂಟ್‌ಗಳು, ಔಷಧಾಲಯಗಳು ಮತ್ತು ಆಟೋಮೊಬೈಲ್ ಸೇವಾ ಕೇಂದ್ರಗಳು.

**1.2.4.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಜಂಕ್ ಯಾರ್ಡ್‌ಗಳು, ಹೈನು ಮತ್ತು ಕೋಳಿ ಸಾಕಣೆ ಕೇಂದ್ರಗಳು, 50 ಅಶ್ವಶಕ್ತಿಗೂ ಹೆಚ್ಚು ವಿದ್ಯುತ್ ಸಂಪರ್ಕವಿಲ್ಲದ ಐಸ್ ಮತ್ತು ಫ್ರೀಜಿಂಗ್ ಪ್ಲಾಂಟುಗಳು, ಮತ್ತು ಕ್ರೀಡೆಗಳು ಮತ್ತು ಮನರಂಜನೆ ಉಪಯೋಗಗಳು.

**1.2.5 ಮಧ್ಯಮ ಕೈಗಾರಿಕಾ ವಲಯ:**

**1.2.5.1 ಅನುಮತಿಸಬಹುದಾದ ಉಪಯೋಗಗಳು:** 500ಕ್ಕಿಂತ ಹೆಚ್ಚಿಲ್ಲದಂತೆ ಕೆಲಸಗಾರರನ್ನು ಹಾಗೂ ಒಟ್ಟು 100 ಅಶ್ವಶಕ್ತಿಗಿಂತಲೂ ಹೆಚ್ಚು ಸ್ಥಾಪಿತ ವಿದ್ಯುಚ್ಛಕ್ತಿ ಹೊಂದಿಲ್ಲದೆ ಇರುವ ಲಘು ಕೈಗಾರಿಕಾವಲಯದಲ್ಲಿ ಅನುಮತಿಸ ಬಹುದಾದ ಎಲ್ಲ ಉಪಯೋಗಗಳು, ಅನುಸೂಚಿ Iಸಿ ನಿರೂಪಣಾ ಪಟ್ಟಿಯಲ್ಲಿ ನಮೂದಿಸಿರುವ ನಿರ್ವಹಣಾ ಮಟ್ಟ ಹೊಂದಿರುವ ಕೈಗಾರಿಕೆಗಳು, ಉಗ್ರಾಣ ಮತ್ತು ದಾಸ್ತಾನು, ಸಾರ್ವಜನಿಕ ಉಪಯುಕ್ತತೆ ಕಟ್ಟಡಗಳು, ವಾಹನ ನಿಲುಗಡೆ, ಸರಕನ್ನು ಹೊರುವ ಮತ್ತು ಸರಕನ್ನು ಇಳಿಸುವ ವ್ಯವಸ್ಥೆಗಳನ್ನು ಎಲ್ಲ ಸಂದರ್ಭಗಳಲ್ಲಿಯೂ ಒದಗಿಸತಕ್ಕದ್ದು, 300 ಚ.ಮೀ.ಗೆ ಮೀರದ ಅಥವಾ ಒಟ್ಟು ಪ್ರದೇಶದ ಶೇಕಡ 5ರಷ್ಟು ಇದ್ದಲ್ಲಿ ಯಾವುದು ಕಡಿಮೆಯೋ ಅಂತಹ ಕ್ಷೇತ್ರ ಹೊಂದಿರುವ ಮ್ಯಾನೇಜರ್ ಮತ್ತು ಪಹರೆ ಸಿಬ್ಬಂದಿಯ ನಿವಾಸಿಗಳು.

**1.2.5.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಲಘು ಕೈಗಾರಿಕಾ ವಲಯದಲ್ಲಿ ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಮತ್ತು ನಿರ್ವಹಣಾ ಮಟ್ಟಕ್ಕೆ ಅನುಗುಣವಾಗಿರುವ 300 ಅಶ್ವಶಕ್ತಿವರೆಗಿನ ವಿದ್ಯುತ್ ಬಳಕೆಯ ಎಲ್ಲ ಉಪಯೋಗಗಳು.

**1.2.6 ಭಾರಿ ಕೈಗಾರಿಕಾ ವಲಯ:**

**1.2.6.1 ಅನುಮತಿಸಬಹುದಾದ ಉಪಯೋಗಗಳು:** ಲಘು ಮತ್ತು ಮಧ್ಯಮ ಕೈಗಾರಿಕಾ ವಲಯಗಳಲ್ಲಿ ಅನುಮತಿಸಬಹುದಾದ ಮತ್ತು 500 ಕ್ಕಿಂತ ಹೆಚ್ಚು ನೌಕರರನ್ನು ನೇಮಕ ಮಾಡಿಕೊಂಡಿರುವ ಎಲ್ಲಾ ಕೈಗಾರಿಕೆಗಳು, ಮತ್ತು ಎಲ್ಲಾ ಉಪಯೋಗಗಳು 600 ಚ.ಮೀ ಮೀರದ ಅಥವಾ ಒಟ್ಟು ಪ್ರದೇಶದ ಶೇಕಡ 5 ರಷ್ಟು ಇದರಲ್ಲಿ ಯಾವುದು ಕಡಿಮೆಯೋ ಅಂತಹ ಕ್ಷೇತ್ರ ಹೊಂದಿರುವ ಮ್ಯಾನೇಜರ್ ಮತ್ತು ಪಹರೆ ಸಿಬ್ಬಂದಿಯ ನಿವಾಸಗಳು. ಕಾರ್ಮಿಕರ ಸಂಖ್ಯೆ ಮತ್ತು ವಿದ್ಯುತ್ ಪ್ರಮಾಣವು ಮಧ್ಯಮ ಕೈಗಾರಿಕೆಗೆ ನಿಗದಿ ಪಡಿಸಿದ ಪ್ರಮಾಣಕ್ಕೆ ಮೀರಿದಲ್ಲಿ ಅಂತಹ ಕೈಗಾರಿಕೆಯನ್ನು ಭಾರಿ ಕೈಗಾರಿಕೆಯೆಂದು ವರ್ಗೀಕರಿಸತಕ್ಕದ್ದು.

**1.2.6.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಲಘು ಮತ್ತು ಮಧ್ಯಮ ಕೈಗಾರಿಕಾ ವಲಯದಲ್ಲಿ ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಎಲ್ಲಾ ಬಳಕೆಗಳು, ಕಸಾಯಿಖಾನೆ, ರುದ್ರಭೂಮಿ, ಸ್ಮಶಾನ, ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅಗತ್ಯ ರೀತಿಯಲ್ಲಿ ಮುಕ್ತತೆ ಪ್ರಮಾಣಪತ್ರ ಪಡೆದು, ಪ್ರಮುಖ ಗಾಳಿ ಬೀಸುವ ದಿಕ್ಕುಗಳಿಂದ ದೂರವಿರುವ ಅಸಹ್ಯ ಮತ್ತು ಅಪಾಯಕರ ಕೈಗಾರಿಕೆಗಳು.

**1.2.7 ಸಾರ್ವಜನಿಕ ಮತ್ತು ಅರೆ ಸಾರ್ವಜನಿಕ ಉಪಯೋಗ:**

**1.2.7.1 ಅನುಮತಿಸಬಹುದಾದ ಉಪಯೋಗಗಳು:** ಸರ್ಕಾರಿ ಆಡಳಿತ ಕೇಂದ್ರಗಳು, ಜಿಲ್ಲಾ ಕಛೇರಿಗಳು, ಕಾನೂನು ನ್ಯಾಯಾಲಯಗಳು, ಕಾರಾಗೃಹಗಳು, ಪೋಲಿಸು ಠಾಣೆಗಳು, ಸಾಂಸ್ಥಿಕ ಕಛೇರಿಗಳು, ಗ್ರಂಥಾಲಯಗಳನ್ನು ಒಳಗೊಂಡಂತೆ ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಸ್ಥೆಗಳು, ಓದುವ ಕೋಣೆಗಳು ಮತ್ತು ಕ್ಲಬ್ಬುಗಳು, ವೈದ್ಯಕೀಯ ಮತ್ತು ಆರೋಗ್ಯ ಸಂಸ್ಥೆಗಳು,–ಸಮುದಾಯ ಭವನಗಳು, ವಾಣಿಜ್ಯೇತರ ಉದ್ದೇಶದ ಅಪೇರಾಹೌಸ್‌ಗಳು, ಸಭಾ ಕೇಂದ್ರಗಳು, ಪ್ರದರ್ಶನಗಳು, ಮೊದಲಾದ ಸಾಂಸ್ಕೃತಿಕ ಸಂಸ್ಥೆಗಳು, ಉಪಯುಕ್ತತೆ ಮತ್ತು ಸೇವೆಗಳು, ವಿಲೇವಾರಿ ಕೆಲಸಗಳು ಸೇರಿದಂತೆ ನೀರು ಪೂರೈಕೆ ಜೋಡಣೆಗಳು, ವಿದ್ಯುತ್ ಯಂತ್ರಗಳು, ಹೈ ಟೆನ್ಷನ್ ಉಪಕೇಂದ್ರಗಳು, ಗ್ಯಾಸ್ ಜೋಡಣೆಗಳು ಮತ್ತು ಗ್ಯಾಸ್ ಕಾಮಗಾರಿ, ಅಗ್ನಿಶಾಮಕ ಠಾಣೆಗಳು, ಬ್ಯಾಂಕಿಂಗ್ ಸಂಸ್ಥೆಗಳು, ಇಂಧನ ತುಂಬುವ ಕೇಂದ್ರಗಳು ಮತ್ತು ಅವಶ್ಯಕ ಸಿಬ್ಬಂದಿಗೆ ವಸತಿ ಗೃಹಗಳು ಮತ್ತು ಉದ್ಯಾನವನ ಮತ್ತು ಆಟದ ಮೈದಾನಗಳಲ್ಲಿ ಅನುಮತಿಸಬಹುದಾದ ಎಲ್ಲಾ ಉಪಯೋಗಗಳು.

**ಸೂಚನೆ:–** ಸಾರ್ವಜನಿಕ ಮತ್ತು ಅರೆಸಾರ್ವಜನಿಕ ಉಪಯೋಗಗಳನ್ನು ಸೂಕ್ತ ನಿರ್ವಹಣೆ ಮತ್ತು ಕಾರ್ಯನಿರ್ವಹಿಸುವ ಸ್ಥಿತಿಯಲ್ಲಿಡಲು ತಮ್ಮದೇ ಆದ ಆವರಣದಲ್ಲಿ ವಾಣಿಜ್ಯೇತರ ಆಧಾರಗಳ ಮೇಲೆ, ಸಂಬಂಧಪಟ್ಟ ಸಂಸ್ಥೆಗೆ ಅಧೀನವಾಗಿರುವ ರೆಸ್ಟೋರೆಂಟ್‌ಗಳು, ಬ್ಯಾಂಕ್‌ಗಳು, ಕ್ಯಾಂಟೀನುಗಳು ಮತ್ತು 240 ಚ.ಮೀ ಕ್ಷೇತ್ರವನ್ನು ಮೀರದಂತಹ ಸಿಬ್ಬಂದಿ ವಸತಿಗಳು, ಇವುಗಳಿಗೆ ಅನುಮತಿ ನೀಡಬಹುದು.

**1.2.7.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಸರ್ಕಾರಿ ಮುದ್ರಣಾಲಯ, ವಾಹನ ನಿಲುಗಡೆ ಪ್ರದೇಶ, ದುರಸ್ತಿ ಅಂಗಡಿಗಳು, ಸ್ಟೇಡಿಯಂಗಳು, ಸ್ಮಶಾನಗಳು, ಮನರಂಜನಾ ಕ್ಲಬ್ಬುಗಳು, ಕ್ಯಾಂಟೀನುಗಳು, ಗ್ರಂಥಾಲಯಗಳು, ಮತ್ಸ್ಯಾಗಾರಗಳು, ಪ್ಲಾನಿಟೋರಿಯ, ತೋಟಗಾರಿಕೆಯ ನರ್ಸರಿ ಮತ್ತು ಈಜುಕೊಳಗಳು.

**1.2.8 ಉದ್ಯಾನವನಗಳು ಮತ್ತು ಬಯಲುಜಾಗ ಮತ್ತು ಆಟದ ಮೈದಾನಗಳು (ಸಾರ್ವಜನಿಕ ಮನರಂಜನಾ ಪ್ರದೇಶವು ಸೇರಿದಂತೆ):**

**1.2.8.1 ಅನುಮತಿಸಬಹುದಾದ ಉಪಯೋಗಗಳು:–** ಕ್ರೀಡಾ ಮೈದಾನಗಳು, ಸ್ಟೇಡಿಯಂ, ಆಟದ ಮೈದಾನಗಳು, ಉದ್ಯಾನವನಗಳು, ಈಜು ಕೊಳಗಳು, ಇತರ ಮನರಂಜನಾ ಉಪಯೋಗಗಳು, ಸ್ಮಶಾನಗಳು, ತೋಟದ ಜಮೀನು, ಚಿತಾಗಾರ.

**1.2.8.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಬಯಲು ರಂಗ ಮಂದಿರಗಳು, ಒಳಾಂಗಣ ಮನರಂಜನಾ ಬಳಕೆಗಳು, ಪಹರೆದಾರರಿಗೆ ನಿವಾಸಗಳು, ಸಾಮಾಜಿಕ ಕ್ಲಬ್ಬುಗಳು, ಕ್ಯಾಂಟೀನುಗಳು, ಗ್ರಂಥಾಲಯಗಳು, ಸರ್ಕಾರಿ ಔಷದಾಲಯಗಳು, ಹಾಲಿನ ಬೂತ್‌ಗಳು, ಹಾಪ್‌ಕಾಮ್ಸ್ ಮತ್ತು ಒಟ್ಟು ಪ್ರದೇಶದ ಶೇಕಡ 5 ರಷ್ಟು ಮೀರದಂತಿರುವ ಉದ್ಯಾನವನ ಮತ್ತು ಬಯಲು ಜಾಗಗಳ ಅಧೀನ ಸಾರ್ವಜನಿಕ ಉಪಯೋಗಗಳು.

**1.2.9 ಸಾರಿಗೆ ಮತು ಸಂಪರ್ಕ:**

**1.2.9.1 ಅನುಮತಿಸಬಹುದಾದ ಉಪಯೋಗಗಳು:** ರೈಲ್ವೆ ಪ್ರಾಂಗಣ, ರೈಲ್ವೆ ನಿಲ್ದಾಣ, ಬಸ್‌ನಿಲ್ದಾಣ, ಬಸ್ಸು ತಂಗುದಾಣ, ರಸ್ತೆ ಸಾರಿಗೆ ಡಿಪೋ ಮತ್ತು ವಾಹನ ನಿಲುಗಡೆ ಪ್ರದೇಶಗಳು, ವಿಮಾನ ನಿಲ್ದಾಣ, ಟೆಲಿಗ್ರಾಫ್ ಕಛೇರಿಗಳು, ದೂರವಾಣಿ ವಿನಿಮಯ ಕೇಂದ್ರಗಳು, ಟಿ.ವಿ.ಸ್ಟೇಷನ್, ಮೈಕ್ರೋವೇವ್ ಸ್ಟೇಷನ್‌ಗಳು, ಪಹರೆದಾರರಿಗೆ ಅವಶ್ಯವಿರುವ ವಸತಿ ಗೃಹಗಳು.

**1.2.9.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಕ್ಯಾಂಟೀನುಗಳು, ಬ್ಯಾಂಕಿಂಗ್ ಕೌಂಟರುಗಳು, ಕ್ಲಬ್ಬುಗಳು, ದಾಸ್ತಾನು ಮಳಿಗೆಗಳು, ಒಳಾಂಗಣ ಮನರಂಜನಾ ಕ್ಲಬ್ಬುಗಳು ಮತ್ತು ಇತರ ಅಧೀನ ಉಪಯೋಗಗಳು. ಇಂತಹ ಅಧೀನ ಉಪಯೋಗಗಳ ಕ್ಷೇತ್ರವು, ಒಟ್ಟು ಪ್ರದೇಶವು ಶೇಕಡ 5 ರಷ್ಟನ್ನು ಮೀರತಕ್ಕದ್ದಲ್ಲ.

**1.2.10 ಉಪಯುಕ್ತತೆಗಳು ಮತ್ತು ಸೇವೆಗಳು:**

**1.2.10.1 ಅನುಮತಿಸಬಹುದಾದ ಉಪಯೋಗಗಳು:**ನೀರು ಸರಬರಾಜು ಜೋಡಣೆಗಳು, ಸಂಸ್ಕರಣ ಯಂತ್ರಗಳು ಸೇರಿದಂತೆ, ಒಳಚರಂಡಿ ಮತ್ತು ನೈರ್ಮಲ್ಯ ಜೋಡಣೆಗಳು, ವಿದ್ಯುತ್‌ಸ್ಥಾವರಯಂತ್ರಗಳು, ಭಾರಿ ಮತ್ತು ಕಡಿಮೆ ವಿದ್ಯುತ್ ಪ್ರಸಾರಣ ಮಾರ್ಗಗಳು, ಉಪಕೇಂದ್ರ ಇತ್ಯಾದಿ, ಗ್ಯಾಸ್ ಜೋಡಣೆ, ಗ್ಯಾಸ್ ಕೆಲಸಗಳು, ಅಗ್ನಿಶಾಮಕ ಠಾಣೆಗಳು, ಹಾಲಿನ ಕೇಂದ್ರಗಳು ಮತ್ತು ಅಂತಹ ಇತರ ಸಾರ್ವಜನಿಕ ಉಪಯುಕ್ತತೆಗಳು.

**1.2.10.2 ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:** ಕ್ಯಾಂಟೀನು, ಬ್ಯಾಂಕಿಂಗ್ ಕೌಂಟರು, ಕ್ಲಬ್ಬುಗಳು, ಒಳಾಂಗಣ ಮನರಂಜನಾ ಉಪಯೋಗಗಳು ಮತ್ತು ಇತರ ಅಧೀನ ಉಪಯೋಗಗಳು, ಇಂತಹ ಅಧೀನ ಉಪಯೋಗಗಳ ಕ್ಷೇತ್ರವು ಒಟ್ಟು ಪ್ರದೇಶದ ಶೇಕಡ 5 ರಷ್ಟನ್ನು ಮೀರತಕ್ಕದ್ದಲ್ಲ.

**1.2.11 ವ್ಯವಸಾಯದ ವಲಯ:**

**1.2.11.1 ಅನುಮತಿಸಬಹುದಾದ ಉಪಯೋಗಗಳು:** ಕೃಷಿ, ತೋಟಗಾರಿಕೆ, ಹೈನುಗಾರಿಕೆ, ಕೋಳಿ ಸಾಕಣಿಕೆ, ಹಾಲು ಶೈತ್ಯಾಗಾರ ಕೇಂದ್ರ, ಕನಿಷ್ಟ 1.20 ಹೆಕ್ಟೇರ್ ಮಿತಿಯ ವಿಸ್ತೀರ್ಣದ ಒಳಗೆ ಮೇಲು ಪಾಯ ಪ್ರದೇಶವು 200.ಚ.ಮೀ. ಮೀರದಂತೆ ತೋಟದ ಮನೆಗಳು ಮತ್ತು ಅವುಗಳ ಜತೆ ಕಟ್ಟಡಗಳು, ಭೂ ಉಪಯೋಗ ನಕ್ಷೆಯಲ್ಲಿ ನಿಶ್ಚಿತವಾಗಿ ತೋರಿಸಿರುವಂಥ ನಗರ ಗ್ರಾಮ, ಇಟ್ಟಿಗೆ ಗೂಡು ಮೂರು ಮೀಟರ್ ಆಳದವರೆವಿಗೆ, ಕಲ್ಲುಗಣಿ ಕಾಮಗಾರಿ ಮಣ್ಣು ಮತ್ತು ಕಲ್ಲನ್ನು ತೆಗೆಯುವಿಕೆ, ತೋಟಗಳು, ಹಣ್ಣಿನ ತೋಟಗಳು, ನರ್ಸರಿಗಳು ಮತ್ತು ಇತರ ಮುಖ್ಯ ಬೆಳೆಗಳು. ಹುಲ್ಲುಗಾವಲು, ಅರಣ್ಯಭೂಮಿ, ಜೌಗುಭೂಮಿ, ಬಂಜರು ಭೂಮಿ, ಜಲಾಯನ ಪ್ರದೇಶ, ಹೆದ್ದಾರಿ ಸೌಕರ್ಯಗಳು, ಅಂದರೆ ಇಂಧನ ತುಂಬುವ ಕೇಂದ್ರಗಳು, ತೂಕದ ಕಟ್ಟೆಗಳು ಮತ್ತು ಚೆಕ್–ಪೋಸ್ಟ್‌ಗಳು.

**1.2.11.2 ವಿಶೇಷ ಸಂದರ್ಭದಲ್ಲಿ ಅನುಮತಿಸ ಬಹುದಾದ ಉಪಯೋಗಗಳು**

ಪೂಜಾಸ್ಥಳಗಳು. ಶಾಲೆಗಳು, ಆಸ್ಪತ್ರೆಗಳು, ಗ್ರಂಥಾಲಯಗಳು, ಕ್ರೀಡಾ ಕ್ಲಬ್ಬುಗಳು, ಸಾಂಸ್ಕೃತಿಕ ಕಟ್ಟಡಗಳು, ಪ್ರದರ್ಶನ ಕೇಂದ್ರಗಳು, ಉದ್ಯಾನವನ ಮತ್ತು ಬಯಲು ಜಾಗಗಳು ಉತ್ಪನ್ನಗೊಂಡ ಪ್ರದೇಶದಲ್ಲಿ ತೋಟದ ವಸ್ತುಗಳ ದಾಸ್ತಾನು ಮತ್ತು ತೋಟದ ವಸ್ತುಗಳ ಮಾರಾಟ ಮಳಿಗೆಗಳು, ಫಾರಂ ಯಂತ್ರ ಮತ್ತು ಕೃಷಿ ಸರಬರಾಜುಗಳ ಸೇವೆಗಳು, ಮತ್ತು ದುರಸ್ತಿ ಗ್ರಾಮಗಳ ನೈಸರ್ಗಿಕ ವಿಸ್ತರಣೆಗೆ ಕಾಯ್ದಿಟ್ಟ ಪ್ರದೇಶದಲ್ಲಿ ವಸತಿ ಪ್ರದೇಶದ ಬೆಳವಣಿಗೆ ಮತ್ತು ಇಂತಹ ಪ್ರದೇಶದಲ್ಲಿರುವಂತಹ ಕಟ್ಟಡಗಳು ಎರಡು ಮಹಡಿಗಳಿಗೆ ಮೀರತಕ್ಕದಲ್ಲ. (ನೆಲ ಅಂತಸ್ತು+ ಒಂದು)

**ಸೂಚನೆ:–** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದಿಂದ ಒಂದು ಕಟ್ಟಡಕ್ಕಾಗಿ ಸರಬರಾಜು ಮಾಡಿದ ವಿದ್ಯುತ್ತಿನ ಪ್ರಮಾಣ ಮತ್ತು ಅಗತ್ಯವಿರುವ ಜನರೇಟರುಗಳ ಸಾಮರ್ಥ್ಯಕ್ಕನುಗುಣವಾಗಿ ಮಾಹಿತಿಯನ್ನು ಪಡೆದ ನಂತರ ಯಾವುದೇ ವಲಯದಲ್ಲಿ ವಿದ್ಯುತ್ ಖೋತಾ ಮತ್ತು ವಿದ್ಯುತ್ ವೈಫಲ್ಯಗಳಿಗೆ ಬದಲಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ಸರಬರಾಜು ಮಾಡುವ ವಿದ್ಯುತ್ತಿನ ಪ್ರಮಾಣದಷ್ಟಕ್ಕೆ ಡೀಸೆಲ್ ಜನರೇಟರುಗಳಿಗೆ ಅನುಮತಿಸಬಹುದು. ಆದರೆ ವಸತಿ ವಲಯದಲ್ಲಿ ಡೀಸೆಲ್ ಜನರೇಟರುಗಳ ಸ್ಥಾಪನೆಗೆ ಉತ್ತೇಜಿಸತಕ್ಕದ್ದಲ್ಲ ಮತ್ತು ಸ್ಥಳ ಪರಿಶೀಲನೆಯ ನಂತರ ಹಾಗೂ ಜನರೇಟರುಗಳನ್ನು ಸ್ಥಾಪಿಸುವ ಸ್ಥಳದಿಂದ 100. ಮೀಟರ್ ಅಂತರದ ಒಳಗೆ ವಾಸಿಸುವ ಜನರಿಂದ ನಿರಾಕ್ಷೇಪಣಾ ಪತ್ರ ಪಡೆದು, ವಿಶೇಷ ಸಂದರ್ಭಗಳಲ್ಲಿ ಅನುಮತಿ ನೀಡತಕ್ಕದ್ದು.

**ಅನುಸೂಚಿ–I ಎ**

**( ಉಪ ವಿಧಿ ಸಂಖ್ಯೆ : 13- ಅನುಸೂಚಿ I ರ ಪರಿಚ್ಛೇಧ 1.2.1 ಮತ್ತು 1.2.2 ಗಳೊಂದಿಗೆ ಓದಿ)**

**ವಸತಿ ವಲಯದಲ್ಲಿ (ವಾಸದ ಕಟ್ಟಡ ಒಂದುಭಾಗವಾಗಿ):**

**ಚಿಲ್ಲರೆ ವ್ಯಾಪಾರದ ವಲಯದಲ್ಲಿ ಅನುಮತಿಸ ಬಹುದಾದ ಸೇವಾ ಕೈಗಾರಿಕೆಗಳ ನಿರೂಪಣಾ ಪಟ್ಟಿ**

| ಕ್ರಮ ಸಂಖ್ಯೆ | ವಿವರಣೆ |
|---|---|
| 1. | ಬ್ರೆಡ್ಡು ಮತ್ತು ಬೇಕರಿಗಳು |
| 2. | ಮಿಠಾಯಿ, ಸಕ್ಕರೆ ಮಿಠಾಯಿ ಮತ್ತು ಸಿಹಿ ತಿಂಡಿಗಳು |
| 3. | ಬಿಸ್ಕತ್ತು ತಯಾರಿಕೆ |
| 4. | ಐಸ್, ಐಸ್ ಕ್ರೀಮ್ |
| 5. | ಶೈತ್ಯಾಗಾರ (ಸಣ್ಣ ಪ್ರಮಾಣ) |
| 6. | ಸೋಡಾ ವಾಟರ್ ಮತ್ತು ಹಣ್ಣಿನ ರಸಗಳು |
| 7. | ಹಲ್ಲರ್ ಮತ್ತು ಹಿಟ್ಟಿನ ಗಿರಣಿಗಳು |
| 8. | ಆಟೋಮೋಬೈಲ್, ಸ್ಕೂಟರ್ ಮತ್ತು ಸೈಕಲ್ಲು ಸರ್ವೀಸು ಮತ್ತು ದುರಸ್ತಿ ಕಾರ್ಖಾನೆಗಳು |
| 9. | ಪೀಠೋಪಕರಣಗಳು (ಮರದ್ದು ಮತ್ತು ಉಕ್ಕು) |
| 10. | ಮುದ್ರಣ, ಪುಸ್ತಕದ ಬೈಂಡಿಂಗ್, ಎಂಬೋಸಿಂಗ್ ಇತ್ಯಾದಿ. |
| 11. | ಲಾಂಡ್ರಿ, ಡ್ರೈಕ್ಲೀನಿಂಗ್ ಮತ್ತು ಡೈಯಿಂಗ್ ಸೌಲಭ್ಯಗಳು |
| 12. | ಜನರಲ್ ಜಾಬಿಂಗ್ ಮತ್ತು ಯಂತ್ರ ಅಂಗಡಿಗಳು |
| 13. | ಗೃಹಕೃತ್ಯ ಉಪಕರಣಗಳ ದುರಸ್ತಿ, ವೆಲ್ಡಿಂಗ್, ಸಾಲ್ಡರಿಂಗ್, ಪ್ಯಾಚಿಂಗ್ ಮತ್ತು ಪಾಲಿಶಿಂಗ್ |
| 14. | ಛಾಯಚಿತ್ರ(ಫೋಟೋಗ್ರಫಿ) ಮುದ್ರಣ (ಸೂಚನಾ ಫಲಕ ಮುದ್ರಣವೂ ಸೇರಿದಂತೆ) |
| 15. | ವಲ್ಕನೈಜಿಂಗ್ |
| 16. | ಟೈಲರಿಂಗ್( ಬಟ್ಟೆ ಹೊಲಿಯುವುದು) |
| 17. | ಕೈಮಗ್ಗಗಳು |
| 18. | ವೆಲ್ವೆಟ್ ಕಸೂತಿ ಅಂಗಡಿಗಳು |
| 19. | ಕಲಾ ವಸ್ತುಗಳು ಮತ್ತು ರೇಷ್ಮೆ ಸೀರೆಗಳು, ಮುದ್ರಣ ಮತ್ತು ಬೈಂಡಿಂಗ್ ಕೆಲಸ. |
| 20. | ಆಭರಣಗಳು, ಚಿನ್ನದ ಆಭರಣಗಳು ಮತ್ತು ಬೆಳ್ಳಿಯ ಪಾತ್ರೆಗಳು. |
| 21. | ಕನ್ನಡಿ ಮತ್ತು ಫೋಟೋ ಫ್ರೇಮುಗಳು |
| 22. | ಛತ್ರಿಜೋಡಣೆ |

23. ಬಿದಿರು ಮತ್ತು ಬೆತ್ತದ ಉತ್ಪನ್ನಗಳು
24. ಕ್ರೀಡಾ ಸಾಮಾಗ್ರಿಗಳು ಮತ್ತು ದುರಸ್ತಿ ಅಂಗಡಿಗಳು
25. ವೈದ್ಯಕೀಯ ಉಪಕರಣಗಳ ದುರಸ್ತಿ ಅಂಗಡಿಗಳು
26. ಕನ್ನಡಕದ ಮಸೂರ ಕೊರೆಯುವುದು, ವಾಚು, ಪೆನ್ನು ದುರಸ್ತಿ
27. ರೇಡಿಯೋ ಮತ್ತು ಟಿ.ವಿ. ದುರಸ್ತಿ ಅಂಗಡಿಗಳು
28. ವಿದ್ಯುಚ್ಛಕ್ತಿ ದೀಪ ಜೋಡಿಸುವುದು
29. ಷೂ ತಯಾರಿಕೆ ಮತ್ತು ದುರಸ್ತಿ
30. ಆಡಿಯೋ: ವಿಡಿಯೋ ಲೈಬ್ರರಿಗಳು
31. ಎಸ್.ಟಿ.ಡಿ: ಐ.ಎಸ್.ಡಿ. ಕೌಂಟರುಗಳು.

**ಅನುಸೂಚಿ–I ಬಿ**

**( ಉಪ ವಿಧಿ ಸಂಖ್ಯೆ : 13- ಅನುಸೂಚಿ I ರ ಪರಿಚ್ಛೇಧ 1.2.4ನೊಂದಿಗೆ ಓದಿ)**

**ಲಘು ಕೈಗಾರಿಕಾ ವಲಯದಲ್ಲಿ ಅನುಮತಿಸಬಹುದಾದ ಕೈಗಾರಿಕೆಗಳ ನಿರೂಪಣಾ ಪಟ್ಟಿ**

| ಕ್ರಮ ಸಂಖ್ಯೆ | ವಿವರಣೆ |
|---|---|
| 1 | ಬ್ರೆಡ್ಡು ಮತ್ತು ಬೇಕರಿಗಳು |
| 2 | ಮಿಠಾಯಿ, ಸಕ್ಕರೆ ಮಿಠಾಯಿ ಮತ್ತು ಸಿಹಿ ತಿಂಡಿಗಳು |
| 3 | ಐಸ್, ಐಸ್ ಕ್ರೀಮ್ |
| 4 | ಶೈತ್ಯಾಗಾರ (ಸಣ್ಣ ಪ್ರಮಾಣ) |
| 5 | ಸೋಡಾ ವಾಟರ್ ಮತ್ತು ಹಣ್ಣಿನ ರಸಗಳು |
| 6 | 25 ಅಶ್ವಶಕ್ತಿ ವರೆಗಿನ ಹಿಟ್ಟಿನ ಗಿರಣಿಗಳು ಮತ್ತು ಹಲ್ಲರ್ ಮೆಷಿನ್‌ಗಳು |
| 7 | ಬಟ್ಟೆ ಹೊಲಿಯುವುದು ಮತ್ತು ಉಡುಪು ತಯಾರಿಕೆ |
| 8 | ಕೈಮಗ್ಗಗಳು ಮತ್ತು ವಿದ್ಯುತ್ ಮಗ್ಗಗಳು |
| 9 | ಕಸೂತಿ ಸೇರಿದಂತೆ, ಹ್ಯಾಟುಗಳು, ಟೋಪಿಗಳು, ಪೇಟಗಳು |
| 10 | ಲೆಣಿಗೆ ಉಡುಪುಗಳು ಸೇರಿದಂತೆ ಹೊಸ್ಯೈರಿ ವಸ್ತುಗಳು |
| 11 | ಚಿನ್ನ ಮತ್ತು ಬೆಳ್ಳಿಯ ದಾರ |
| 12 | ಷೂ ದಾರ (ಲೇಸ್) ತಯಾರಿಕೆ |
| 13 | ಗೊಂಬೆ ತಯರಿಕೆ (ಮಣ್ಣಿನ,ಕಾಗದದ,ಮರದ,ಪ್ಲಾಸ್ಟಿಕ್ ಲೋಹದ ಮತ್ತು ಟಿನ್ನಿನ) |
| 14 | ಹತ್ತಿ ಮತ್ತು ರೇಷ್ಮೆ ಮುದ್ರಣ |
| 15 | ಹತ್ತಿ ಮತ್ತು ರೇಷ್ಮೆಬಳ್ಳಿಗಳು, ಟ್ವೈನ್ ದಾರ, ಮತ್ತು ದಾರದ ಉಂಡೆ ತಯಾರಿಕೆ. |
| 16 | ವೆಲ್ವೆಟ್ ಕಸೂತಿ ಷೂಗಳು |
| 17 | ನೇಯಿಗೆ ಕೆಲಸ (ಕಿರಿದಾದ ಉಡುಪುಗಳ, ಕಸೂತಿ, ಲೇಸ್ ತಯಾರಿಕೆ) |
| 18 | ದಂತ ಕೆತ್ತನೆಮಾಡುವುದು |
| 19 | ಕಲಾಪಾತ್ರಗಳು, ಮತ್ತು ರೇಷ್ಮೆ ಪರದೆ ಮುದ್ರಣ ಮತ್ತು ಬಾಟಿಕ್ ಕೆಲಸ |
| 20 | ಆಭರಣ, ಚಿನ್ನದ ಆಭರಣ ಮತ್ತು ಬೆಳ್ಳಿ ಪಾತ್ರೆಗಳು |
| 21 | ಮರದ ಮತ್ತು ಕಲ್ಲಿನ ಕೆತ್ತನೆ |
| 22 | ಎಲೆಕ್ಟ್ರೋಪ್ಲೇಟಿಂಗ್, ಮೈಕಾ ಪ್ಲೇಟಿಂಗ್ ಮತ್ತು ಎನ್‌ಗ್ರೇವಿಂಗ್ |
| 23 | ಛಾಯಾಚಿತ್ರ, ಮುದ್ರಣ (ಸೂಚನಾ ಫಲಕ ಮತ್ತು ಬಣ್ಣ ಬಳಿಯುವುದು ಸೇರಿ) |
| 24 | ಕನ್ನಡಿಗಳು ಮತ್ತು ಫೋಟೋ ಫ್ರೇಮುಗಳು |
| 25 | ಛತ್ರಿ ಜೋಡಣೆ |
| 26 | ಬಿದಿರು ಮತ್ತು ಬೆತ್ತದ ಉತ್ಪನ್ನಗಳು |
| 27 | ಕ್ರೀಡಾ ವಸ್ತುಗಳು. |
| 28 | ಕಾರ್ಡ್ ಬೋರ್ಡ್ ಪೆಟ್ಟಿಗೆ ಮತ್ತು ಕಾಗದವನ್ನೊಳಗೊಂಡಂತೆ ಕಾಗದದ ಉತ್ಪನ್ನಗಳು |
| 29 | ಶೈಕ್ಷಣಿಕ ಮತ್ತು ಶಾಲೆಯ ಡ್ರಾಯಿಂಗ್ ಉಪಕರಣಗಳೂ ಸೇರಿದಂತೆ ಲೇಖನ ಸಾಮಗ್ರಿಗಳು |
| 30 | ಪೀಠೋಪಕರಣ ತಯಾರಿಕೆ (ಮರದ ಮತ್ತು ಉಕ್ಕಿನ) |
| 31 | ಸಂಗೀತದ ಉಪಕರಣಗಳು |
| 32 | ಮುದ್ರಣ, ಪುಸ್ತಕದ ಬೈಂಡಿಂಗ್, ಎಂಬಾಂಸಿಂಗ್, ಛಾಯಚಿತ್ರ ಇತ್ಯಾದಿ |
| 33 | ಕನ್ನಡಕದ ಮಸೂರ ಕೊರೆಯುವುದು, ವಾಚು ಮತ್ತು ಪೆನ್ನು ದುರಸ್ತಿ |
| 34 | ರಬ್ಬರ್ ಸ್ಟ್ಯಾಂಪುಗಳು |
| 35 | ಉಕ್ಕಿನ ತಂತಿಯ ಉತ್ಪನ್ನಗಳು |

| ಕ್ರಮ ಸಂಖ್ಯೆ | ವಿವರಣೆ |
|---|---|
| 36 | ಲೋಹದ ಹಾಳೆಯ ಕೆಲಸಗಳು |
| 37 | ಲೋಹದ ಪಾಲಿಷಿಂಗ್ |
| 38 | ಪ್ರಯೋಗ ಶಾಲೆಯ ಪಿಂಗಾಣಿ ಸಾಮಾನುಗಳು |
| 39 | ರೇಡಿಯೋ ಜೋಡಣೆ ಮತ್ತು ಭಾಗಗಳು (ಸಣ್ಣ ಪ್ರಮಾಣ) |
| 40 | ವಿದ್ಯುತ್ ದೀಪ ಜೋಡಣೆ, ನೆರಳು ವಿನ್ಯಾಸ ಇತ್ಯಾದಿ |
| 41 | ಆಟೋಮೊಬೈಲ್ ಸ್ಕೂಟರ್‌ಗಳು ಮತ್ತು ಸೈಕಲ್ಲುಗಳ ಸರ್ವೀಸ್ ಮತ್ತು ದುರಸ್ತಿ ಕಾರ್ಯಾಗಾರ. |
| 42 | ಲಾಂಡ್ರಿ ಮತ್ತು ಡ್ರೈಕ್ಲೀನರ್‌ಗಳು |
| 43 | ಜನರಲ್: ಜಾಬಿಂಗ್ ಯಂತ್ರ |
| 44 | ಕಬ್ಬಿಣದ ಉತ್ಪಾದನೆಗಳು (ವಿದ್ಯುಚ್ಛಕ್ತಿ ಬಳಸುತ್ತಿರುವ ಇತರ ಕೈಗಾರಿಕೆಗಳಿಗೆ ಸಂಬಂಧಿಸಿದಾಗ ಮಾತ್ರ) |
| 45 | ಬಿಸ್ಕತ್ತು ತಯಾರಿಕೆ |
| 46 | ಬ್ರಷ್‌ಗಳು ( ಗೃಹೋಪಯೋಗಿ, ನೈರ್ಮಲ್ಯ ಮತ್ತು ಶೌಚಾಗೃಹ) |
| 47 | ಷೂ ತಯಾರಿಕೆ ಮತ್ತು ದುರಸ್ತಿ. |
| 48 | ಚರ್ಮದ ವಸ್ತುಗಳು. |
| 49 | ಕಮ್ಮಾರಿಕೆ |
| 50 | ಗೃಹೋಪಯೋಗಿ ಉಪಕರಣಗಳು (ದುರಸ್ತಿ, ವೆಲ್ಡಿಂಗ್, ಸಾಲ್ಡರಿಂಗ್, ಪ್ಯಾಕಿಂಗ್ ಮತ್ತು ಪಾಲಿಷಿಂಗ್) |
| 51 | ವಲ್ಕನೈಜಿಂಗ್ ಮತ್ತು ಟೈರ್ ರಿಟ್ರೇಡಿಂಗ್ |
| 52 | ಹಣ್ಣು ಒಣಗಿಸುವುದು ಮತ್ತು ಸಂಗ್ರಹಣೆ |
| 53 | ಸಿಮೆಂಟ್ ಉತ್ಪನ್ನಗಳು |
| 54 | ಮೇಣದ ಬತ್ತಿಗಳು ಮತ್ತು ಮೇಣದ ಉತ್ಪನ್ನಗಳು |
| 55 | ಸೀಮೆಸುಣ್ಣ, ಕ್ರೆಯಾನ್ ಕಲೆಗಾರರ ಬಣ್ಣ |
| 56 | ಹೊಗೆ ಸೊಪ್ಪಿನ ಉತ್ಪನ್ನಗಳು (ಸಿಗರೇಟು ಮತ್ತು ಬೀಡಿಗಳು) |
| 57 | ಕಾಂತಿ ವರ್ಧಕಗಳು ಮತ್ತು ಕೇಶ ತೈಲಗಳು |
| 58 | ಚೂರಿ ಕತ್ತರಿಗಳು |
| 59 | ಸೈಕಲ್ಲಿನ ಭಾಗಗಳು ಮತ್ತು ಸಹಾಯಕ ಉಪಕರಣಗಳು |
| 60 | ಬಾಗಿಲು ಮತ್ತು ಕಿಟಕಿ ಜೋಡಣೆಗಳು |
| 61 | ಮದ್ದು ಮತ್ತು ಔಷಧಿಗಳು |
| 62 | ಲಾಟೀನುಗಳು, ಬ್ಯಾಟರಿಗಳು ಮತ್ತು ಫ್ಲಾಷ್ ಬೆಳಕಿನ ದೀಪಗಳು |
| 63 | ಅಲ್ಯುಮಿನಿಯಂ ತಂತಿಗಳು, ಕೇಕ್‌ಗಳು ಮತ್ತು ಹಿಟ್ಟಿನ ಭಕ್ಷ್ಯಗಳ ಅಚ್ಚುಗಳು |
| 64 | ಪ್ಯಾಡ್ ಬೀಗಗಳು ಮತ್ತು ಒತ್ತುವ ಬೀಗಗಳು |
| 65 | ಹಗ್ಗ ತಯಾರಿಕೆ |
| 66 | ಗಣಿತ ಶಾಸ್ತ್ರದ ಉಪಕರಣಗಳು |
| 67 | ಗೃಹೋಪಯೋಗಿ ಅಡಿಗೆ ಸಾಮಾನುಗಳು |
| 68 | ಕಟ್ಟಡ ನಿರ್ಮಾಣದ ಕಬ್ಬಿಣದ ಸಾಮಾಗ್ರಿಗಳು (ಹಾರ್ಡ್‌ವೇರ್ಸ್) |
| 69 | ಟಿನ್ ಉತ್ಪನ್ನಗಳು |
| 70 | ಕನ್ನಡಕದ ಫ್ರೇಮುಗಳು |
| 71 | ಬಟನ್ ಕ್ಲಿಪ್ಸ್ |
| 72 | ವ್ಯಾಕ್ಸ್ ಪಾಲಿಷಿಂಗ್ |
| 73 | ಸಜ್ಜುಗಾರ ತಕ್ಕಡಿಗಳು ಮತ್ತು ಇತರ ಸ್ಪ್ರಿಂಗ್‌ಗಳು |
| 74 | ಎಲ್ಲಾ ಬಗೆಯ ನಿಷ್ಕೃಷ್ಟತೆಯ ಉಪಕರಣಗಳು |
| 75 | ಸೇಫ್ಟಿ ಪಿನ್ನುಗಳು |
| 76 | ಸ್ಕ್ರೂಗಳು, ಬೋಲ್ಟುಗಳು, ನೆಟ್ಟುಗಳು, ರಾಟೆಗಳು, ಸರಪಳಿಗಳು, ಗೇಯರ್‌ಗಳು |
| 77 | ಕಂಡ್ಯೂಟ್ ಪೈಪುಗಳು ರಚನೆ (2 ಅಂಗುಲ ವ್ಯಾಸಕ್ಕಿಂತ ಹೆಚ್ಚಿರಬಾರದು) |
| 78 | ಬಕೆಟ್ಟುಗಳು ಮತ್ತು ಲೋಹದ ಪಾತ್ರೆಗಳು, ಪ್ಲಾಸ್ಟಿಕ್ ಜಗ್ಗುಗಳು ಮತ್ತು ಜೋಡಣೆಗಳು, ಲೋಹದ ಎಂಬಾಸಿಂಗ್ |
| 79 | ಎಣ್ಣೆ ಸ್ಟೌವುಗಳು ಮತ್ತು ಒತ್ತಡ ದೀಪಗಳು |
| 80 | ಕೈನಿಂದ ತಯಾರಿಸಿದ ಕಾಗದದ ಮಿಲ್ಲು (ಸಣ್ಣ ಪ್ರಮಾಣ) |
| 81 | ಬಟ್ಟೆ ಸೋಪುಗಳು |
| 82 | ಕೈ ಸಲಕರಣೆಗಳು |

**ಸೂಚನೆ– ಪೂರೈಸಬೇಕಾದ ಷರತ್ತುಗಳು:**

1. ವಿದ್ಯುತ್ ಸಂಪರ್ಕವಿರಲಿ ಅಥವಾ ಇಲ್ಲದಿರಲಿ 100 ಜನ ಕ್ಕಿಂತಲೂ ಹೆಚ್ಚು ಕಾರ್ಮಿಕರನ್ನು ನೇಮಿಸದೆ ಇರುವ ಹಾಗೂ ಒಟ್ಟು 25 ಅಶ್ವಶಕ್ತಿಗಿಂತಲೂ ಹೆಚ್ಚು ವಿದ್ಯುತ್ ಸಂಪರ್ಕ ಇಲ್ಲದಿರುವ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಮಾತ್ರ ಅನುಮತಿ ನೀಡತಕ್ಕದ್ದು.
2. ಪ್ರತಿ ಕೈಗಾರಿಕೆಗೂ ಅದರ ಕಾರ್ಯನಿರ್ವಹಣಾ ವೈಲಕ್ಷಣಗಳಾದ, (ಎ). ಶಬ್ಧ (ಬಿ). ಸ್ಪಂದನ (ಸಿ) ಧೂಳು (ಡಿ). ವಾಸನೆ (ಇ).ಹೊರದೂಡುವ ಪದಾರ್ಥ (ಎಫ್) ಸಾಮಾನ್ಯ ಉಪದ್ರವ ಮೊದಲಾದವುಗಳ ನಿರ್ಬಂಧನೆಗಳಿಗೆ ಒಳಪಟ್ಟು ಅನುಮತಿ ನೀಡತಕ್ಕದ್ದು.

**ಅನುಸೂಚಿ–I ಸಿ**

**( ಉಪ ವಿಧಿ ಸಂಖ್ಯೆ : 13- ಅನುಸೂಚಿ I ರ ಪರಿಚ್ಛೇಧ 1.2.5ನೊಂದಿಗೆ ಓದಿ)**

**ಮಧ್ಯಮ ಕೈಗಾರಿಕಾ ವಲಯದಲ್ಲಿ ಅನುಮತಿಸಬಹುದಾದ ಕೈಗಾರಿಕೆಗಳ ನಿರೂಪಣಾ ಪಟ್ಟಿ**

1. ಸಣ್ಣ ಗೃಹೋಪಯೋಗಿ ಸಲಕರಣೆಗಳು ಮತ್ತು ಸಾಧನಗಳು (ಕೊಠಡಿ ತಾಪಕಗಳು) ಕೂಲರ್‌ಗಳು, ಹಾಟ್ ಪ್ಲೇಟುಗಳು, ಕಬ್ಬಿಣದ ದೀಪಗಳು ಇತ್ಯಾದಿ.
2. ಟ್ರಂಕು ಮತ್ತು ಲೋಹದ ಪೆಟ್ಟಿಗೆಗಳು, ಸೂಟ್‌ಕೇಸುಗಳು, ಸಣ್ಣ ಪಾತ್ರೆಗಳು ಇವುಗಳ ತಯಾರಿಕೆ.
3. ವೈಜ್ಞಾನಿಕ, ಶೈಕ್ಷಣಿಕ ಮತ್ತು ಕೈಗಾರಿಕಾ ನಿಷ್ಕೃಷ್ಟ ಉಪಕರಣಗಳು.
4. ಗೋಡೆ ಗಡಿಯಾರಗಳು ಮತ್ತು ವಾಚುಗಳು, ಛಾಯಾಗ್ರಹಣದ ಸಲಕರಣೆಗಳು.
5. ಬೆರಳಚ್ಚು ಯಂತ್ರಗಳು.

**ಅನುಸೂಚಿ – II**

**(ಉಪವಿಧಿ ಸಂಖ್ಯೆ : 3.2)**

**ಕಟ್ಟಡ ಪರವಾನಿಗೆಗಾಗಿ ಅರ್ಜಿಯ ನಮೂನೆ**

ಕಟ್ಟಡವನ್ನು ನಿರ್ಮಿಸಲು, ಪುನಃ ನಿರ್ಮಿಸಲು ಅಥವಾ ಕಟ್ಟಡದ ಯಾವುದೇ ಭಾಗದಲ್ಲಿ ಬದಲಾವಣೆ ಮಾಡಲು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್‌ಗಳ ಅಧಿ ನಿಯಮ 1976ರ ಪ್ರಕರಣ 299, 304 ಅಥವಾ 312 ರ ಮೇರಿಗೆ ಕಟ್ಟಡದ ಪರವಾನಿಗೆ ಪಡೆಯಲು ಬಳಸಬೇಕಾದ ಅರ್ಜಿ ನಮೂನೆ.

ಗೆ,

**ಆಯುಕ್ತರು,**
**ಬೆಂಗಳೂರು ಮಹಾನಗರ ಪಾಲಿಕೆ,**
**ಬೆಂಗಳೂರು.**

ಮಾನ್ಯರೇ,

ನಾನು ಆಸ್ತಿ ಸಂಖ್ಯೆ _______ ನಿವೇಶನ ಸಂಖ್ಯೆ_______ ಸಿಟಿಸರ್ವೆ ಸಂಖ್ಯೆ_______ ವಾರ್ಡ್‌ಸಂಖ್ಯೆ:–______ ಸ್ಥಳ /ಬೀದಿ___________________________ ಇದನ್ನು ಹೊಂದಿರುವ ಕಟ್ಟಡದ ನಿರ್ಮಾಣ/ಪುನರ್‌ನಿರ್ಮಾಣ/ ಕಟ್ಟಡದಲ್ಲಿ ಬದಲಾವಣೆಗಳನ್ನು ಬೆಂಗಳೂರು ನಗರ ಮುನಿಸಿಪಲ್ ಕಾರ್ಪೋರೇಷನ್ ಕಟ್ಟಡ ಉಪವಿಧಿಗಳ ಉಪವಿಧಿ 3.0ಕ್ಕೆ ಅನುಗುಣವಾಗಿ ಮಾಡಲು ಉದ್ದೇಶ ಹೊಂದಿರುವುದಾಗಿ ಈ ಮೂಲಕ ತಮ್ಮ ಗಮನಕ್ಕೆ ತಂದಿರುತ್ತೇನೆ ಮತ್ತು ಇದರೊಂದಿಗೆ ನಾನು ______________________________________________ (ಬಿಡಿ ಅಕ್ಷರಗಳಲ್ಲಿ ಹೆಸರು) ಸಹಿ ಮಾಡಿರುವ ಕಟ್ಟಡ ನಕ್ಷೆಗಳನ್ನು ಮತ್ತು ವಿವರಗಳನ್ನು ನಾಲ್ಕು ಪ್ರತಿಗಳಲ್ಲಿ ಸಲ್ಲಿಸಿರುತ್ತೇನೆ.

ಈ ನಿರ್ಮಾಣಕ್ಕೆ ನೋಂದಣೆ ಸಂಖ್ಯೆ ____________________ ಹೊಂದಿರುವ ವಾಸ್ತು ಶಿಲ್ಪಿ / ಇಂಜಿನಿಯರ್/ಮೇಲ್ವಿಚಾರಕರಾದ ಶ್ರೀಮತಿ/ಶ್ರೀ_________________ಇವರು ಮೇಲ್ವಿಚಾರಕರಾಗಿರುತ್ತಾರೆ.

ಇದರೊಂದಿಗೆ ಕೆಳಕಂಡ ದಾಖಲಾತಿಗಳನ್ನು ಅಡಕಗೊಳಿಸಲಾಗಿದೆ.

1. ಹಕ್ಕು ಪತ್ರ / ಸ್ವಾಧೀನತೆ ಪ್ರಮಾಣ ಪತ್ರ.
2. ಪರವಾನಿಗೆ ಶುಲ್ಕ ಪಾವತಿ ಮಾಡಿರುವ ರಸೀತಿ.
3. ನಿವೇಶನದಲ್ಲಿ ಹಾಲಿ ಇರುವ ಗಿಡ ಮರಗಳು, ಬಾವಿ ಮೊದಲಾದುವುಗಳನ್ನು ತೋರಿಸುವ ಸ್ಥಳ ನಕ್ಷೆ (ನಿವೇಶನದ ಇಳಿಜಾರಿನ ಪ್ರಮಾಣ ಶೇಕಡ 5 ಅಥವಾ 1:20 ಪ್ರಮಾಣಕ್ಕೆ ಹೆಚ್ಚಾದಲ್ಲಿ ಅಥವಾ ತಳಅಂತಸ್ತು / ಸೆಲ್ಲಾರ್‌ಗಳನ್ನು ಜಮೀನು ಮಟ್ಟದ ತಳಭಾಗದಲ್ಲಿ ಉದ್ದೇಶಿಸಿದಲ್ಲಿ ಬ್ಲಾಕ್ ಲೆವೆಲ್‌ಗಳನ್ನು ಒದಗಿಸತಕದ್ದು.)
4. ಇತ್ತೀಚಿನ ಖಾತೆ ಪ್ರಮಾಣ ಪತ್ರ ಮತ್ತು ತೆರಿಗೆ ನಿರ್ಧರಣೆ ಪುಸ್ತಕದ ಉಧೃತ ಭಾಗ.
5. ಇತ್ತೀಚಿನವರೆವಿಗೆ ತೆರಿಗೆ ಸಂದಾಯ ಮಾಡಿದ ರಸೀತಿಗಳು (ಧೃಢೀಕರಿಸಿದ ಪ್ರತಿಗಳು).
6. ಭೂಪನ ಮತ್ತು ಭೂದಾಖಲೆಗಳ(ನಗರ ಭೂಮಾಪನ)ಇಲಾಖೆಯಿಂದ ನೀಡಲಾಗಿರುವ ಸ್ವತ್ತಿನ ಕಾರ್ಡು ಮತ್ತು ನಕ್ಷೆ.
7. ಇದಕ್ಕೆ ಮೊದಲು ಮಂಜೂರಾಗಿರುವ ನಕ್ಷೆ.
8. ನಿಗದಿ ಪಡಿಸಿರುವ ನಮೂನೆಯ ಪ್ರಕಾರ ಪ್ರಮಾಣ ಪತ್ರ ಮತ್ತು ನಷ್ಟ ಭರ್ತಿ ಪತ್ರ.
9. ತಳಪಾಯದ ಪ್ರಮಾಣಪತ್ರ.
10. ಎಲ್ಲಿ ಅನ್ವಯಿಸುವುದೋ ಅಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ವಿದ್ಯುತ್ ಪ್ರಸಾರಣಾ ನಿಗಮ ಕರ್ನಾಟಕ ಕೊಳಚೆ ನಿರ್ಮೂಲನಾ ಮತ್ತು ಅಭಿವೃದ್ಧಿ ಮಂಡಳಿ, ಜಿಲ್ಲಾ ಮ್ಯಾಜಿಸ್ಟ್ರೇಟ್, ಕಾರ್ಖಾನೆಗಳ ಪರಿವೀಕ್ಷಕರು, ಸ್ಫೋಟಕಗಳ ನಿಯಂತ್ರಣಾಧಿಕಾರಿ, ರೈಲ್ವೇ ಇಲಾಖೆ, ಅಗ್ನಿ ಶಾಮಕ ಇಲಾಖೆ, ರಾಷ್ಟ್ರೀಯ ವಿಮಾನ ನಿಲ್ದಾಣ ಪ್ರಾಧಿಕಾರ, ಸರ್ಕಾರದ ಆರೋಗ್ಯ ಇಲಾಖೆ ಮತ್ತು ಇತರೆ ಯಾವುದೇ ಅಧಿಕಾರಿಗಳು ನೀಡಿರುವ ನಿರಾಕ್ಷೇಪಣಾ ಪ್ರಮಾಣ ಪತ್ರಗಳು.
11. ಎಲ್ಲಾ ಅಂತಸ್ತುಗಳ ಕಟ್ಟಡದ ನಕ್ಷೆ – ನೋಟ, ವಿಭಾಗ ನಕ್ಷೆ ಮತ್ತು ನಿರ್ಮಾಣದ ವಿವರಗಳೊಂದಿಗೆ.
12. ರಾಷ್ಟ್ರೀಯ ಕಟ್ಟಡದ ಸಂಸ್ಥೆಯ (ಎನ್.ಬಿ.ಓ) ಅನುಸೂಚಿ II.

13. ಅಭಿವೃದ್ಧಿ ಶುಲ್ಕ ಸಂದಾಯ ಮಾಡಿರುವ ಬಗ್ಗೆ ರಸೀತಿ.
14. ಇತರೆ ಯಾವುದೇ ಮಾಹಿತಿ.

ನಾನು ಮುಂದುವರಿದು ಕೆಳಗಿನ ಮಾಹಿತಿಗಳನ್ನು ನೀಡುತ್ತಿದ್ದೇನೆ.

(ಎ).ಕಟ್ಟಡದ ಅಧಿಭೋಗವನ್ನು ________________ ಉಪಯೋಗಕ್ಕಾಗಿ ಉದ್ದೇಶಿಸಲಾಗಿದೆ.

(ಬಿ). ಕಟ್ಟಡದ ನಿರ್ಮಾಣಕ್ಕೆ ಬಳಸಲಾಗುವ ನೀರಿನ ಮೂಲ______________ ಆಗಿರುತ್ತದೆ.

(ಸಿ). ಕಟ್ಟಡ ಸಾಮಾಗ್ರಿಗಳ ದಾಸ್ತಾನು ಅವಧಿ____________ ಆಗಿರುತ್ತದೆ.

ನಾನು ಸಲ್ಲಿಸಿರುವ ನಕ್ಷೆಗಳನ್ನು ಅನುಮೋದಿಸಿ ನಿರ್ಮಾಣ ಕಾರ್ಯ ಕೈಗೊಳ್ಳಲು ಅನುಮತಿ ನೀಡುವಂತೆ ಕೋರುತ್ತಿದ್ದೇನೆ.

ಮಾಲೀಕನ ಸಹಿ____________________

ಮಾಲೀಕನಹೆಸರು .______________________

(ಬಿಡಿ ಅಕ್ಷರಗಳಲ್ಲಿ)

ದಿನಾಂಕ:_________ ಮಾಲೀಕನ ವಿಳಾಸ.____________________

## ಅನುಸೂಚಿ–III

**(ಉಪವಿಧಿ ಸಂಖ್ಯೆ : 3.2.11)**

**ಮೇಲ್ವಿಚಾರಣೆಯ ನಮೂನೆ**

ಆಸ್ತಿಸಂಖ್ಯೆ_____________ನಿವೇಶನ ಸಂಖ್ಯೆ_________ ಸಿಟಿ ಸರ್ವೆ ಸಂಖ್ಯೆ_____ಸ್ಥಳ/ಬೀದಿ______ ಇದನ್ನು ಹೊಂದಿರುವ ಕಟ್ಟಡದ ನಿರ್ಮಾಣ/ಪುನರ್ ನಿರ್ಮಾಣ/ಕಟ್ಟಡದಲ್ಲಿ ವಾಸ್ತವಿಕ ಬದಲಾವಣೆಗಳನ್ನು ನನ್ನ ಮೇಲ್ವಿಚಾರಣೆಯಲ್ಲಿ ಕೈಗೊಳ್ಳಲಾಗುವುದೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ ಮತ್ತು ಎಲ್ಲ ಸಾಮಗ್ರಿಗಳೂ (ವಿಧ ಮತ್ತು ಶ್ರೇಣಿ) ಮತ್ತು ನಿರ್ಮಾಣದ ಕಾಮಗಾರಿಯು ಈ ಪ್ರಮಾಣ ಪತ್ರದೊಂದಿಗೆ ಸಲ್ಲಿಸಿರುವ ಸಾಮಾನ್ಯ ಮತ್ತು ವಿಷಧೀಕರಿಸಿರುವ ವಿವರಗಳಿಗೆ ಅನುಸಾರವಾಗಿರುವುದಾಗಿಯೂ ಮತ್ತು ನಿರ್ಮಾಣವನ್ನು ಅನುಮೋದಿತ ನಕ್ಷೆಗಳ ಪ್ರಕಾರ ಕೈಗೊಳ್ಳುವುದಾಗಿಯೂ ಪ್ರಮಾಣೀಕರಿಸುತ್ತೇನೆ.

ಕಟ್ಟಡ ನಿರ್ಮಾಣದ ವೇಳೆಯಲ್ಲಿ ಮಂಜೂರಾತಿ ನಕ್ಷೆಗೆ ವ್ಯತಿರಿಕ್ತವಾಗಿ ಅಥವಾ ಕಟ್ಟಡಗಳ ಉಪವಿಧಿಗಳು / ವಲಯನಿಯಮಗಳ ಉಲ್ಲಂಘನೆಗಳ ಬಗ್ಗೆ ಮೂರು ದಿವಸಗಳ ಒಳಗಾಗಿ ಪ್ರಾಧಿಕಾರಕ್ಕೆ ವರದಿ ನೀಡಲಾಗುವುದೆಂದು ನಾನು ಇದರೊಂದಿಗೆ ಮುಚ್ಚಳಿಗೆ ನೀಡಿರುತ್ತದೆ.

ಎತ್ತರಿಸಿದ ಕಟ್ಟಡಗಳಿಗೆ ಅಥವಾ ಉಪವಿಧಿ 30.0 ರಲ್ಲಿ ನಮೂದಿಸಿರುವ ಕಟ್ಟಡಗಳಿಗೆ ಅನ್ವಯಿಸುತ್ತದೆ. ಕಟ್ಟಡವು ಭೂ ಕಂಪನದಿಂದಾಗುವ ಪರಿಣಾಮಗಳನ್ನು ತಡೆಯುವ ಸಾಮರ್ಥ್ಯ ಹೊಂದುವಂತೆ ರಾಷ್ಟ್ರೀಯ ಕಟ್ಟಡ ಸಂಹಿತೆ ಮತ್ತು ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ ಪ್ರಕಟಣೆ 1893-2002 ಇವುಗಳಲ್ಲಿ ನಿಗದಿ ಪಡಿಸಿರುವ ವಿಧಿ ವಿಧಾನಗಳಂತೆ ಕಟ್ಟಡ ವಿನ್ಯಾಸವನ್ನು ರಚಿಸಿರುವುದಾಗಿಯೂ ಪ್ರಮಾಣೀಕರಿಸುತ್ತೇನೆ.

ನೊಂದಾಯಿತ ವಾಸ್ತುಶಿಲ್ಪಿಯ /ಇಂಜಿನಿಯರ್ / ಮೇಲ್ವಿಚಾರಕನ ಹೆಸರು (ಬಿಡಿ ಅಕ್ಷರಗಳಲ್ಲಿ)

_________________________

ವಾಸ್ತುಶಿಲ್ಪಿ /ಇಂಜಿನಿಯರ್ / ಮೇಲ್ವಿಚಾರಕನ ನೋಂದಣಿ ಸಂಖ್ಯೆ

_____________

ದಿನಾಂಕ: __________ ನೊಂದಾಯಿತ ವಾಸ್ತು ಶಿಲ್ಪಿ / ಇಂಜಿನಿಯರ್ / ಮೇಲ್ವಿಚಾರಕನ ವಿಳಾಸ. ______________

---

## ಅನುಸೂಚಿ– IV

**(ಉಪವಿಧಿ ಸಂಖ್ಯೆ 3.6)**

**ವಾಸ್ತುಶಿಲ್ಪಿಗಳು / ಇಂಜಿನಿಯರರು / ಮೇಲ್ವಿಚಾರಕರ ನೊಂದಾವಣೆ:–**

ಕಟ್ಟಡ ಪರವಾನಿಗೆ ಯೋಜನೆಗಳನ್ನು ಸಿದ್ಧಪಡಿಸುವ ಮತ್ತು ಮೇಲ್ವಿಚಾರಣೆ ಮಾಡುವ ತಾಂತ್ರಿಕ ಸಿಬ್ಬಂದಿಯನ್ನು ನೊಂದಾವಣೆಮಾಡಲು ವಿದ್ಯಾರ್ಹತೆ ಮತ್ತು ನೋಂದಣಿ ಕಾರ್ಯವಿಧಾನ ಹಾಗೂ ಅವರ ಕರ್ತವ್ಯ ಮತ್ತು ಹೊಣೆಗಾರಿಕೆ.

**IV 1.0 ಸಾಮಾನ್ಯ :** ಕಟ್ಟಡ ಪರವಾನಿಗೆ ಮತ್ತು ಮೇಲ್ವಿಚಾರಣೆಯ ವಿವಿಧ ಕಾರ್ಯಗಳನ್ನು ಕೈಗೊಳ್ಳಲು ಅಗತ್ಯವಿರುವ ತಾಂತ್ರಿಕ ಸಿಬ್ಬಂದಿಯ ವಿದ್ಯಾರ್ಹತೆ ಮತ್ತು ದಕ್ಷತೆಯ ವಿವರಗಳನ್ನು ಭಾಗ IV-2 ರಿಂದ IV-5.2 ರವರೆವಿಗೆ ನೀಡಲಾಗಿದೆ.

**IV 2.0 ವಾಸ್ತು ಶಿಲ್ಪಿ:**

**IV 2.1 ಅರ್ಹತೆಗಳು:**

ವಾಸ್ತುಶಿಲ್ಪಿಯ ಕನಿಷ್ಟ ವಿದ್ಯಾರ್ಹತೆಯು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆರ್ಕಿಟೆಕ್ಟ್ಸ್ ಸಂಸ್ಥೆಯ ಅಸೋಸಿಯೇಟ್ ಮೆಂಬರ್‌ಷಿಪ್ ಹೊಂದಿರುವುದು ಅಥವಾ ಅಂತಹ ಸದಸ್ಯತ್ವ ಪಡೆಯಲು ಅರ್ಹತೆ ನೀಡಬಲ್ಲ ಡಿಗ್ರಿ ಅಥವಾ ಡಿಪ್ಲೋಮೋ ಪದವಿಯನ್ನು ಪಡೆದಿರುವುದು ಅಥವಾ ಆರ್ಕಿಟೆಕ್ಟ್ಸ್ ಅಧಿ ನಿಯಮ 1972 (1972 ನೇ ಕೇಂದ್ರ ಅಧಿನಿಯಮ 20) ಇದರಲ್ಲಿ ನಿಗದಿ

ಪಡಿಸಿರುವ ವಿದ್ಯಾರ್ಹತೆಗಳನ್ನು ಪಡೆದಿರುವುದು ಮತ್ತು ಈ ಅಧಿನಿಯಮದ ಅಡಿಯಲ್ಲಿ ವಾಸ್ತುಶಿಲ್ಪಿಗಳ ಮಂಡಲದಲ್ಲಿ ನೊಂದಣಿಹೊಂದಿರುವುದು, ಆಗಿರತಕ್ಕದ್ದು.

**IV 2.2 ದಕ್ಷತೆ:**

ನೊಂದಾಯಿತ ವಾಸ್ತುಶಿಲ್ಪಿಯು ಈ ಕೆಳಕಂಡವುಗಳನ್ನು ಸಲ್ಲಿಸಲು ಅರ್ಹತೆಹೊಂದಿರುತ್ತಾನೆ.

(ix) ಕಟ್ಟಡ ಪರವಾನಿಗೆಗೆ ಸಂಬಂದಿಸಿದ ಎಲ್ಲಾ ನಕ್ಷೆಗಳು ಮತ್ತು ಅಗತ್ಯವಾದ ಪ್ರಮಾಣ ಪತ್ರಗಳೊಂದಿಗೆ ಸಂಬಂಧಪಟ್ಟ ಮಾಹಿತಿ.

(x) 500 ಚದರ ಮೀಟರ್ ಕ್ಷೇತ್ರದವರೆವಿಗಿನ ನಿವೇಶನಗಳಲ್ಲಿ ನಿರ್ಮಿಸುವ ಮತ್ತು ಮೂರು ಅಂತಸ್ತುಗಳವರೆವಿಗೆ ಅಥವಾ 10.50ಮೀಟರ್ ಎತ್ತರದವರೆವಿಗೆ ನಿರ್ಮಿಸುವ ಕಟ್ಟಡಗಳ ನಿರ್ಮಾಣದ ವಿವರಗಳು ಮತ್ತು ಲೆಕ್ಕಾಚಾರಗಳು.

(xi) ಎಲ್ಲ ಕಟ್ಟಡಗಳ ಸೇವಾ ಯೋಜನೆಗಳು.

(xii) ಎಲ್ಲ ಕಟ್ಟಡಗಳ ಮೇಲ್ವಿಚಾರಣೆ ಮತ್ತು ಕಾರ್ಯಪೂರ್ಣತಾ ಪ್ರಮಾಣ ಪತ್ರಗಳು.

**IV 3.0 ಇಂಜಿನಿಯರರು:**

**IV 3.1 ವಿದ್ಯಾರ್ಹತೆ :**

ಇಂಜಿನಿಯರರ ಕನಿಷ್ಟ ವಿದ್ಯಾರ್ಹತೆಯು ಇನ್‌ಸ್ಟಿಟ್ಯೂಷನ್ ಆಫ್ ಇಂಜಿನಿಯರ್ಸ್(ಇಂಡಿಯಾ) ಸಂಸ್ಥೆಯ ಸಿವಿಲ್ ಇಂಜಿನಿಯರಿಂಗ್ ವಿಭಾಗದ ಕಾರ್ಪೋರೇಟ್ ಸದಸ್ಯತ್ವ ಅಥವಾ ಅಂತಹ ಸದಸ್ಯತ್ವ ಪಡೆಯಲು ಅವರಿಗೆ ಅರ್ಹತೆ ನೀಡಬಲ್ಲ ಸಿವಿಲ್, ಮುನಿಸಿಪಲ್, ಅಥವಾ ಸ್ಟ್ರಕ್ಚರಲ್ ಇಂಜಿನಿಯರಿಂಗ್ ಡಿಗ್ರಿ ಅಥವಾ ಸಹಾಯಕ ಇಂಜಿನಿಯರ್ ಹುದ್ದೆಗೆ ನೇಮಕವಾಗಲು ಕರ್ನಾಟಕ ಲೋಕಸೇವಾ ಆಯೋಗದಿಂದ ಮಾನ್ಯತೆ ಪಡೆದಿರುವ ವಿದ್ಯಾರ್ಹತೆ ಆಗಿರತಕ್ಕದ್ದು.

**IV 3.2 ದಕ್ಷತೆ:**

ನೋಂದಾಯಿತ ಇಂಜಿನಿಯರರು ಕೆಳಕಂಡವುಗಳನ್ನು ಸಲ್ಲಿಸಲು ಅರ್ಹತೆಹೊಂದಿರುತ್ತಾರೆ.

(i) ಕಟ್ಟಡ ಪರವಾನಿಗೆಗೆ ಸಂಬಂಧಿಸಿದ ಎಲ್ಲಾ ನಕ್ಷೆಗಳು ಮತ್ತು ಅಗತ್ಯವಾದ ಪ್ರಮಾಣ ಪತ್ರಗಳೊಂದಿಗೆ ಸಂಬಂಧಪಟ್ಟ ಮಾಹಿತಿ.

(ii) 500 ಚದರ ಮೀಟರ್ ಕ್ಷೇತ್ರದ ವರೆಗಿನ ನಿವೇಶನಗಳಲ್ಲಿ ನಿರ್ಮಿಸುವ ಮತ್ತು ನಾಲ್ಕು ಅಂತಸ್ತುಗಳವರೆವಿಗೆ ಅಥವಾ 14 ಮೀಟರ್ ಎತ್ತರದವರೆವಿಗೆ ನಿರ್ಮಿಸುವ ಕಟ್ಟಡದ ನಿರ್ಮಾಣದ ವಿವರಗಳು.

(iii) ಎಲ್ಲಾ ಕಟ್ಟಡಗಳ ಸೇವಾ ಯೋಜನೆಗಳು.

(iv) ಎಲ್ಲಾ ಕಟ್ಟಡಗಳ ಮೇಲ್ವಿಚಾರಣೆ ಮತ್ತು ಕಾರ್ಯಪೂರ್ಣ ಪ್ರಮಾಣ ಪತ್ರಗಳು.

**IV 4.0 ಸ್ಟ್ರಕ್ಚರಲ್ ಇಂಜಿನಿಯರ್:**

**IV 4.1 ವಿದ್ಯಾರ್ಹತೆ:**

ಸ್ಟ್ರಕ್ಚರಲ್ ಇಂಜಿನಿಯರ್‌ರ ಕನಿಷ್ಟ ವಿದ್ಯಾರ್ಹತೆಯು ಇನ್‌ಸ್ಟಿಟ್ಯೂಷನ್ ಆಫ್ ಇಂಜಿನಿಯರ್ಸ್ (ಇಂಡಿಯಾ) ಸಂಸ್ಥೆಯ ಸಿವಿಲ್ ಇಂಜಿನಿಯರಿಂಗ್ ವಿಭಾಗದ ಕಾರ್ಪೊರೇಟ್ ಸದಸ್ಯತ್ವ ಅಥವಾ ಅಂತಹ ಸದಸ್ಯತ್ವ ಪಡೆಯಲು ಅವರಿಗೆ ಅರ್ಹತೆ ನೀಡಬಲ್ಲ ಸಿವಿಲ್, ಅಥವಾ ಸ್ಟ್ರಕ್ಚರಲ್ ಇಂಜಿನಿಯರಿಂಗ್ ಡಿಗ್ರಿ ಅಥವಾ ಸಹಾಯಕ ಇಂಜಿನಿಯರ್ ಹುದ್ದೆಗೆ ನೇಮಕವಾಗಲು ಕರ್ನಾಟಕ ಲೋಕಸೇವಾ ಆಯೋಗದಿಂದ ಮಾನ್ಯತೆ ಪಡೆದಿರುವ ವಿದ್ಯಾರ್ಹತೆಯೊಂದಿಗೆ ಸ್ಟ್ರಕ್ಚರಲ್ ಇಂಜಿನಿಯರಿಂಗ್ ರಚನೆ ಮತ್ತು ನಿರ್ಮಾಣದ ವಿಷಯದಲ್ಲಿ ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅನುಭವ ಇರತಕ್ಕದ್ದು.

**IV 4.2 ದಕ್ಷತೆ:**

ನೊಂದಾಯಿತ ಸ್ಟ್ರಕ್ಚರಲ್ ಇಂಜಿನಿಯರರು ಕೆಳಕಂಡವುಗಳನ್ನು ಸಲ್ಲಿಸಲು ಅರ್ಹತೆಹೊಂದಿರುತ್ತಾರೆ.

(i) ಕಟ್ಟಡ ಪರವಾನಿಗೆಗೆ ಸಂಬಂದಿಸಿದ ಎಲ್ಲ ನಕ್ಷೆಗಳು ಮತ್ತು ಅಗತ್ಯವಾದ ಪ್ರಮಾಣ ಪತ್ರಗಳೊಂದಿಗೆ ಸಂಬಂದಪಟ್ಟ ಮಾಹಿತಿ.

(ii) ಎಲ್ಲಾ ಕಟ್ಟಡಗಳ ನಿರ್ಮಾಣದ ವಿವರಗಳು ಮತ್ತು ಲೆಕ್ಕಾಚಾರಗಳು.

(iii) ಎಲ್ಲಾ ಕಟ್ಟಡಗಳ ಸೇವಾ ಯೋಜನೆಗಳು.

(iv) ಎಲ್ಲಾ ಕಟ್ಟಡಗಳ ಮೇಲ್ವಿಚಾರಣೆ ಮತ್ತು ಕಾರ್ಯಪೂರ್ಣ ಪ್ರಮಾಣ ಪತ್ರಗಳು.

**IV 5.0 ಮೇಲ್ವಿಚಾರಕ:**

**IV 5.1 ವಿದ್ಯಾರ್ಹತೆ:**

ಮೇಲ್ವಿಚಾರಕರ ಕನಿಷ್ಟ ವಿದ್ಯಾರ್ಹತೆಯು ಕರ್ನಾಟಕ ಲೋಕ ಸೇವಾ ಆಯೋಗದಿಂದ ಮಾನ್ಯತೆ ಪಡೆದ ಸಿವಿಲ್ ಇಂಜಿನಿಯರಿಂಗ್ ಡಿಪ್ಲೋಮಾ/ ಅಥವಾ ಆರ್ಕಿಟೆಕ್ಚರ್ ಅಥವಾ ಅದಕ್ಕೆ ಸಮಾನವಾದ ವಿದ್ಯಾರ್ಹತೆಯೊಂದಿಗೆ ಕಟ್ಟಡದ ವಿನ್ಯಾಸ ರಚನೆ, ನಿರ್ಮಾಣ ಮತ್ತು ಮೇಲ್ವಿಚಾರಣೆಯ ವಿಷಯದಲ್ಲಿ ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅನುಭವ ಇರತಕ್ಕದ್ದು.

**IV 5.2 ದಕ್ಷತೆ:**

ನೋಂದಾಯಿತ ಮೇಲ್ವಿಚಾರಕರು ಕೆಳಕಂಡವುಗಳನ್ನು ಸಲ್ಲಿಸಲು ಅರ್ಹತೆ ಹೊಂದಿರುತ್ತಾರೆ.

(i) 200 ಚದರ ಮೀಟರ್ ಕ್ಷೇತ್ರದವರೆಗಿನ ನಿವೇಶನಗಳಲ್ಲಿ ಮತ್ತು ಎರಡು ಅಂತಸ್ತುಗಳವರೆವಿಗೆ ಅಥವಾ 7 ಮೀಟರ್ ಎತ್ತರದ ವರೆವಿಗಿನ ಕಟ್ಟಡಗಳ ಕಟ್ಟಡ ಪರವಾನಿಗೆಗೆ ಸಂಬಂಧಿಸಿದ ಎಲ್ಲ ನಕ್ಷೆಗಳು ಮತ್ತು ಅಗತ್ಯವಾದ ಪ್ರಮಾಣ ಪತ್ರಗಳೊಂದಿಗೆ ಸಂಬಂಧಪಟ್ಟ ಮಾಹಿತಿ.

(ii) ಮೇಲಿನ ಪ್ಯಾರಾ (i) ರಲ್ಲಿ ನಮೂದಿಸಿರುವ ಕಟ್ಟಡಗಳ ಮೇಲ್ವಿಚಾರಣೆ ಪ್ರಮಾಣ ಪತ್ರ.

**IV 6.0 ನೊಂದಣಿ ಶುಲ್ಕ:**

**IV 6.1** ನೊಂದಣಿಗೆ ಸಲ್ಲಿಸುವ ಪ್ರತಿ ಅರ್ಜಿಯೂ ಕೆಳಗೆ ನಮೂದಿಸಿರುವಂತೆ ನೊಂದಣಿ ಶುಲ್ಕವನ್ನು ಸಂದಾಯಮಾಡಿರುವ ರಸೀತಿಯನ್ನು ಒಳಗೊಳ್ಳತ್ತಕ್ಕದ್ದು.

(ಎ) ಮೇಲ್ವಿಚಾರಕ : ರೂ.1000 (ಒಂದು ಸಾವಿರ ರೂಪಾಯಿಗಳು ಮಾತ್ರ)

(ಬಿ) ಇಂಜಿನಿಯರ್/ಸ್ಟ್ರಕ್ಚರಲ್ ಇಂಜಿನಿಯರ್/ ವಾಸ್ತುಶಿಲ್ಪಿ: ರೂ.2000(ಎರಡು ಸಾವಿರ ರೂಪಾಯಿಗಳು ಮಾತ್ರ) ಮೇಲ್ಕಂಡ ಶುಲ್ಕವು ಐದು ವರ್ಷಗಳವರೆವಿಗೆ ಮಾನ್ಯತೆಹೊಂದಿರತಕ್ಕದ್ದು.ನವೀಕರಣ ಶುಲ್ಕವು ಪ್ರತಿ ಐದು ವರ್ಷಗಳ ನವೀಕರಣಕ್ಕೆ ಮೇಲ್ಕಾಣಿಸಿದ ಪ್ರಮಾಣದಲ್ಲಿ ಇರತಕ್ಕದ್ದು.

**IV 7.0 ನೊಂದಣಿಯ ಮಾನ್ಯತೆ :**

**IV 7.1** ಮೇಲ್ಕಂಡ ವರ್ಗಗಳಿಗೆ ಪ್ರಾಧಿಕಾರದಿಂದ ಅನುದತ್ತವಾದ ಪ್ರತಿಯೊಂದು ನೊಂದಣಿಯ ಮಾನ್ಯತೆಯು ಐದು ವರ್ಷಗಳ ವರೆವಿಗೆ ಇರತಕ್ಕದ್ದು ಮತ್ತು ಪ್ರಾಧಿಕಾರದಿಂದ ರದ್ದುಪಡಿಸದೇ ಇದ್ದಲ್ಲಿ ಪ್ರತಿ ಐದು ವರ್ಷಗಳಿಗೊಮ್ಮೆ ನವೀಕರಿಸಿಕೊಳ್ಳಲು ಅರ್ಹತೆ ಹೊಂದಿರತಕ್ಕದ್ದು. ನವೀಕರಣದ ಅರ್ಜಿಯನ್ನು ನೊಂದಣಿಯ ಮಾನ್ಯತೆಯ ಅವಧಿಯು ಕೊನೆಗೊಳ್ಳುವ ದಿನಾಂಕಕ್ಕೆ ಒಂದು ತಿಂಗಳ ಮುಂಚಿತವಾಗಿಯೇ ಸಲ್ಲಿಸತಕ್ಕದ್ದು. ಜಾರಿಯಲ್ಲಿರುವ ಉಪವಿಧಿಗಳನ್ನು ಮತ್ತು ನಿಯಮಗಳನ್ನು ಯಾವುದೇ ಮಾಲೀಕ/ ಕಟ್ಟಡ ನಿರ್ಮಾಪಕನು ಉಲ್ಲಂಘಿಸಿದಲ್ಲಿ, ಈ ವಿಷಯವನ್ನು ನೋಂದಾಯಿತ ವಾಸ್ತುಶಿಲ್ಪಿ / ಇಂಜಿನಿಯರ್/ ಮೇಲ್ವಿಚಾರಕನಿಗೆ ಪ್ರಾಧಿಕಾರವು ಮೊದಲ ಬಾರಿಗೆ ತಿಳಿಸತಕ್ಕದ್ದು, ಎರಡನೆಯ ಬಾರಿಗೆ ಎಚ್ಚರಿಕೆ ನೀಡತಕ್ಕದ್ದು ಮತ್ತು ಈ ರೀತಿಯ ಉಲ್ಲಂಘನೆಯು ಮೂರನೇ ಬಾರಿಗೆ ಪುನರಾವರ್ತನೆಯಾದರೆ ನೋಂದಣಿಯನ್ನು ರದ್ದುಗೊಳಿಸತಕ್ಕದ್ದು.

**IV 8.0** ನಕ್ಷೆಗಳ ತಯಾರಿಕೆ, ವಿನ್ಯಾಸಗಳ ರಚನೆ ಮತ್ತು ಕಾಮಗಾರಿಗಳ ಮೇಲ್ವಿಚಾರಣೆ ಕಾರ್ಯವನ್ನು ಕೈಗೊಳ್ಳುವ ತಾಂತ್ರಿಕ ಸಿಬ್ಬಂದಿಯ ಅರ್ಜಿದಾರರು ಅಥವಾ ಮಾಲೀಕರು (ಪ್ರಕರಣಕ್ಕೆ ಯಾವುದು ಅನ್ವಯವೋ ಅದರಂತೆ) ಕರ್ತವ್ಯ ಮತ್ತು ಹೊಣೆಗಾರಿಕೆ:–

(ಎ) ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1976, ಅದರ ಅಡಿಯಲ್ಲಿನ ನಿಯಮಗಳು ಮತ್ತು ಉಪವಿಧಿಗಳು ಹಾಗೂ ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನ ಅಧಿನಿಯಮ 1965 ಮತ್ತು ಅದರ ಅಡಿಯಲ್ಲಿನ ನಿಬಂಧನೆಗಳಿಗೆ ತಾಂತ್ರಿಕ ಸಿಬ್ಬಂದಿಯು ಪರಿಚಿತರಾಗಿರತಕ್ಕದ್ದು. ಮೇಲ್ಕಾಣಿಸಿದ ಅಧಿನಿಯಮಗಳ ಉಪವಾಕ್ಯಗಳಿಗೆ ಅನುಸಾರವಾಗಿ ನಿಗದಿಪಡಿಸಿದ ಪ್ರಮಾಣಗಳ ಪ್ರಕಾರ ಎಲ್ಲ ಅಳತೆಗಳನ್ನು ತೋರಿಸಿರುವಂತೆ ಹಾಗೂ ಕ್ಷೇತ್ರಗಳ ಕೋಷ್ಟಕಗಳು, ಚಿತ್ರಗಳು, ಮತ್ತು ವಿವರಗಳೊಂದಿಗೆ ಅಂತಸ್ತು ನಕ್ಷೆಗಳನ್ನೂ, ವಿಭಾಗ ನಕ್ಷೆಗಳನ್ನು, ಹೊರನೋಟಗಳನ್ನು ಮತ್ತು ಇತರ ನಿರ್ಮಾಣದ ವಿವರಗಳನ್ನು ತಾಂತ್ರಿಕ ಸಿಬ್ಬಂದಿಯು ತಯಾರಿಸತಕ್ಕದ್ದು.

(ಬಿ) ಅಗತ್ಯವಾದ ದಾಖಲೆಗಳೊಂದಿಗೆ ಮತ್ತು ಎಲ್ಲ ವಿವರಗಳನ್ನು ಯಾವುದೇ ರೀತಿ ಹೊಡೆದುಹಾಕದಂತೆ, ಅಳಸದಂತೆ, ಅಥವಾ ತಿದ್ದುಪಡಿ ಮಾಡದಂತೆ ವ್ಯವಸ್ಥಿತವಾಗಿ, ಚೊಕ್ಕಟವಾಗಿ ಮತ್ತು ಸ್ಪಷ್ಟವಾಗಿ ಕಾಣುವ ರೀತಿಯಲ್ಲಿ ಅವರು ತಯಾರಿಸತಕ್ಕದ್ದು.

(ಸಿ) ತಾವು ಕೈಗೊಂಡಿರುವ ಕಾಮಗಾರಿಗೆ ಸಂಬಂಧಿಸಿದಂತೆ ಮಹಾನಗರ ಪಾಲಿಕೆಯಿಂದ ಸ್ವೀಕರಿಸಲಾದ ಎಲ್ಲ ಅಗತ್ಯಗಳನ್ನು ಶ್ರದ್ದೆಯಿಂದ, ತ್ವರಿತವಾಗಿ ಮತ್ತು ಸಂಪೂರ್ಣವಾಗಿ ಹಾಗೂ ವೈಯುಕ್ತಿಕವಾಗಿ ನೆರವೇರಿಸತಕ್ಕದ್ದು, ಮಹಾನಗರ ಪಾಲಿಕೆಯ ಅಗತ್ಯಗಳನ್ನು ಅವರು ಒಪ್ಪದಿದ್ದಲ್ಲಿ ಯಾವುದೇ ಅಗತ್ಯಗಳನ್ನು ನೆರವೇರಿಸದಿರಲು ತಮ್ಮ ಆಕ್ಷೇಪಣೆಗಳನ್ನು ನಿಗದಿತ ಅವಧಿಯಲ್ಲಿ ಬರವಣಿಗೆಯಲ್ಲಿ ತಿಳಿಸತಕ್ಕದ್ದು. ಇಲ್ಲದಿದ್ದಲ್ಲಿ ಅವರ ಅರ್ಜಿಗಳನ್ನು ಮತ್ತು ದಾಖಲೆಗಳನ್ನು ಆಯುಕ್ತರು ಕೂಡಲೇ ದಾಖಲು ಮಾಡತಕ್ಕದ್ದು ಮತ್ತು ಪುನರಾರಂಭ ಮಾಡತಕ್ಕದ್ದಲ್ಲ.

(ಡಿ) ಮಹಾನಗರ ಪಾಲಿಕೆಯ ಅಗತ್ಯಗಳಿಗೆ ಅನುಸಾರವಾಗಿ ನಕ್ಷೆಗಳು, ದಾಖಲೆಗಳು ಮತ್ತು ವಿವರಣೆಗಳಲ್ಲಿ ಮಾಡಬೇಕಾದ ತಿದ್ದುಪಡಿಗಳನ್ನು ಮತ್ತು ಇತರ ಬದಲಾವಣೆಗಳನ್ನು ಅವರು ಕೂಡಲೇ ಮಾಲೀಕರಿಗೆ ತಿಳಿಸತಕ್ಕದ್ದು.

(ಇ) ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1976 ಮತ್ತು ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮ, 1961 ಮತ್ತು ಇವುಗಳ ಅಡಿಯಲ್ಲಿನ ನಿಯಮಗಳು, ಉಪವಿಧಿಗಳು, ನಿಬಂಧನೆಗಳು ಮತ್ತು ಇತರ ಆದೇಶಗಳಿಗೆ ವಿರುದ್ದವಾಗಿ ಯಾವುದೇ ನಿರ್ಮಾಣವು ಇಂಗಿತ ಹೊಂದಿದ್ದರೆ ಅಥವಾ ಪ್ರಸ್ತಾವನೆ ಹೊಂದಿದ್ದರೆ ಅಥವಾ ಕಾರ್ಯಗತವಾಗುತ್ತಿದ್ದರೆ ಅಥವಾ ಈಗಾಗಲೇ ಕಾರ್ಯಗತವಾಗಿದ್ದರೆ ಅಂತಹ ಕಾಮಗಾರಿಯ ಮೇಲ್ವಿಚಾರಣೆಯೊಂದಿಗೆ ಅಥವಾ ಮೇಲ್ವಿಚಾರಣೆ ಇಲ್ಲದೆ ನಕ್ಷೆಗಳನ್ನು ಸಿದ್ದಪಡಿಸಿದ ಮತ್ತು ಸಲ್ಲಿಸುವ ಕಾರ್ಯವನ್ನು ಅವರಾಗಲೀ, ಅಥವಾ ಅವರ ಅಧಿಕೃತ ಕಾರ್ಯಕರ್ತರಾಗಲೀ ಅಥವಾ ನೌಕರರಾಗಲೀ ಒಪ್ಪಿಕೊಳ್ಳತಕ್ಕದ್ದಲ್ಲ.

(ಎಫ್) ಪ್ರಗತಿಯಲ್ಲಿರುವ ಕಾಮಗಾರಿಯ ಸಮೀಕ್ಷೆ ಮತ್ತು ಪರೀಕ್ಷೆಗಳನ್ನು ನಡೆಸಲು ಅವರು ಮಹಾನಗರ ಪಾಲಿಕೆಯ ಸಿಬ್ಬಂದಿಗೆ ಎಲ್ಲ ಸೌಲಭ್ಯಗಳನ್ನು ಒದಗಿಸತಕ್ಕದ್ದು.

(ಜಿ) ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ,1976 ಮತ್ತು ಕರ್ನಾಟಕ ನಗರ ಮತ್ತು ಗ್ರಾಮೀಣ ಯೋಜನಾ ಅಧಿನಿಯಮ, 1961ಮತ್ತು ಇವುಗಳ ಅಡಿಯಲ್ಲಿನ ನಿಯಮಗಳು, ಉಪವಿಧಿಗಳು, ನಿಬಂಧನೆಗಳು ಮತ್ತು ಇತರ ಆದೇಶಗಳಿಗೆ ವಿರುದ್ದವಾಗಿ ನಿವೇಶನದಲ್ಲಿ ಕೈಗೊಳ್ಳಲಾದ ಯಾವುದೇ ಕಾಮಗಾರಿಯ ಬಗ್ಗೆ ಅವರು ಪ್ರಾಧಿಕಾರಕ್ಕೆ ವರದಿ ಮಾಡತಕ್ಕದ್ದು. ನಿರ್ಮಾಣ ಹಂತದಲ್ಲಿ ಮಂಜೂರಾತಿ ಪಡೆದ ನಕ್ಷೆಗೆ ವಿರುದ್ದವಾಗಿ ಕೈಗೊಳ್ಳಲಾದ ಯಾವುದೇ ಕಾಮಗಾರಿಯ ಬಗ್ಗೆಯೂ ಅವರು ಪ್ರಾಧಿಕಾರಕ್ಕೆ ವರದಿ ಮಾಡತಕ್ಕದ್ದು.

(ಹೆಚ್) ಕಾರ್ಯಪ್ರಗತಿಯ ವರದಿಯ ನಮೂನೆಯನ್ನು ಅವರು ನಿಯಮಿತವಾಗಿ ಭರ್ತಿಮಾಡತಕ್ಕದ್ದು ಮತ್ತು ಹಿಂದಿನ ಹಂತದ ಸಮೀಕ್ಷೆ ಮತ್ತು ಪರೀಕ್ಷೆಯನ್ನು ಮಹಾನಗರ ಪಾಲಿಕೆಯ ಅಧಿಕೃತ ಸಿಬ್ಬಂದಿಯಿಂದ ಮಾಡಿಸಿದ ಹೊರತು ಮುಂದಿನ ಹಂತದ

ಕಾಮಗಾರಿಯನ್ನು ಮುಂದುವರಿಸತಕ್ಕದ್ದಲ್ಲ. ಕಾಮಗಾರಿಯ ಪರೀಕ್ಷೆಯನ್ನು ಮಾಡಿದ ಬಳಿಕ ನೀಡಲಾದ ಸೂಚನೆಗಳನ್ನು ಅವರು ಪೂರ್ಣವಾಗಿ ಸಮ್ಮತಿಸತಕ್ಕದ್ದು.

(ಐ) ಪ್ರಾಧಿಕಾರದ ಪೂರ್ವಾನುಮತಿಯಿಲ್ಲದೆ ಅನುಮೋದಿತ ನಕ್ಷೆಗಳನ್ನು ಸಾಮಾಗ್ರಿಗಳ ದೃಷ್ಟಿಯಿಂದಾಗಲೀ ಮತ್ತು ನಿರ್ಮಾಣದ ದೃಷ್ಟಿಯಿಂದಾಗಲೀ ಅವರು ಉಲ್ಲಂಘನೆ ಮಾಡತಕ್ಕದ್ದಲ್ಲ ಅಧಿನಿಯಮದ ಉಪಬಂಧಗಳನ್ನು, ನಿಯಮಗಳನ್ನು ಉಪವಿದಿಗಳನ್ನು, ವಲಯ ನಿಯಮಗಳನ್ನು, ಮಹಾನಗರ ಪಾಲಿಕೆಯ ಸ್ಥಾಯೀ ಆದೇಶಗಳನ್ನು ಮತ್ತು ಕಾರ್ಯನೀತಿ ಆದೇಶಗಳನ್ನು ಉಲ್ಲಂಘನೆಮಾಡುವುದರಿಂದ ಭರಿಸಬೇಕಾದ ತೊಂದರೆಗಳನ್ನು ಅವರು ಕಟ್ಟಡದ ಮಾಲೀಕರಿಗೆ ಮನವರಿಕೆ ಮಾಡಿಕೊಡತಕ್ಕದ್ದು.

(ಜೆ) ಕಾಮಗಾರಿಯು ಪೂರ್ಣಗೊಂಡಾಗ ಕಾರ್ಯಪೂರ್ಣತಾ ಪ್ರಮಾಣ ಪತ್ರವನ್ನು ಮತ್ತು ಕಾರ್ಯಗತಗೊಳಿಸಲಾದ ನಕ್ಷೆ (ಬದಲಾವಣೆಗಳಾಗಿದ್ದ ಪಕ್ಷದಲ್ಲಿ) ಯನ್ನು ಅವರು ಸಲ್ಲಿಸತಕ್ಕದ್ದು. ಕಾರ್ಯಪೂರ್ಣತಾ ಪ್ರಮಾಣ ಪತ್ರದ ಬಗ್ಗೆ ನಿಗದಿತ ಅವಧಿಯೊಳಗಾಗಿ ಮಹಾನಗರ ಪಾಲಿಕೆಯ ಅಗತ್ಯಗಳನ್ನು ಅವರು ನೆರವೇರಿಸತಕ್ಕದ್ದು.

(ಕೆ) ತಾವು ಉದ್ಯೋಗಿಯಾಗಿ ಮುಂದುವರಿಯುವುದಿಲ್ಲವೆಂದು ಮಹಾನಗರ ಪಾಲಿಕೆಗೆ ಲಿಖಿತ ರೂಪದಲ್ಲಿ ತಿಳಿಸುವವರೆವಿಗೂ ಮೇಲ್ವಿಚಾರಣೆ ಕಾರ್ಯವನ್ನು ಅವರು ಮುಂದುವರೆಸಿರುವುದಾಗಿ ಭಾವಿಸತಕ್ಕದ್ದು ಮತ್ತು ಅವರ ನಿರ್ಗಮನವನ್ನು ಮಹಾನಗರ ಪಾಲಿಕೆಯು ಒಪ್ಪಕೊಳ್ಳುವ ದಿನಾಂಕದ ವರೆವಿಗೂ ಕಾರ್ಯಗತಗೊಳಿಸಲಾದ ಕಾಮಗಾರಿಗೆ ಅವರು ಹೊಣೆಗಾರರಾಗಿರತಕ್ಕದ್ದು.

**IV 9.0 ಎತ್ತರಿಸಿದ ಕಟ್ಟಡಗಳ ನಿರ್ಮಾಣ:**

ಕಟ್ಟಡ ನಿರ್ಮಾಪಕರು ಎತ್ತರಿಸಿದ ಕಟ್ಟಡಗಳ ನಿರ್ಮಾಣವನ್ನು ನೊಂದಾಯಿಸಿರುವ ಸ್ಟ್ರಕ್ಚರಲ್ ಇಂಜಿನಿಯರರನ್ನು ನೇಮಿಸಿಕೊಂಡು ಕೈಗೊಳ್ಳತಕ್ಕದ್ದು.

**ಅನುಸೂಚಿ–V ಎ**

**(ಉಪವಿಧಿ ಸಂಖ್ಯೆ : 4.1)**

**ಪರವಾನಿಗೆ ಮಂಜೂರಾತಿಯ ನಮೂನೆ**

**ಇವರಿಂದ,**

ಆಯುಕ್ತರು,
ಬೆಂಗಳೂರು ಮಹಾನಗರ ಪಾಲಿಕೆ
ಬೆಂಗಳೂರು.

**ಇವರಿಗೆ,**

_______________
_______________

ಮಾನ್ಯರೇ,

ಆಸ್ತಿಸಂಖ್ಯೆ________________ನಿವೇಶನ ಸಂಖ್ಯೆ______________ಸಿಟಿಸರ್ವೆ ಸಂಖ್ಯೆ_______________________ ವಾರ್ಡ್ ಸಂಖ್ಯೆ ____________ಸ್ಥಳ/ಬೀದಿ ________________________________ಇದನ್ನು ಹೊಂದಿರುವ ಕಟ್ಟಡದ ನಿರ್ಮಾಣ/ಪುನರ್ ನಿರ್ಮಾಣ/ ಬದಲಾವಣೆಗಳನ್ನು ಮಾಡಲು / ನವೀಕರಣಕ್ಕಾಗಿ ಪರವಾನಿಗೆ ಕೋರಿ ಸಲ್ಲಿಸಿರುವ ನಿಮ್ಮ ಅರ್ಜಿ ಸಂಖ್ಯೆ ________________ ದಿನಾಂಕ __________ ಇದರ ಪ್ರಕಾರ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಾಧಿಕಾರವು ಪರವಾನಿಗೆಯನ್ನು ಮಂಜೂರುಮಾಡಿರುವುದಾಗಿ ನಾನು ನಿಮಗೆ ತಿಳಿಸಬಯಸುತ್ತೇನೆ.

1. ಅನುಮೋದಿತ ನಕ್ಷೆಯ ಒಂದು ಪ್ರತಿಯನ್ನು ಕಾಮಗಾರಿ ಸ್ಥಳದಲ್ಲಿ ಪ್ರದರ್ಶಿಸತಕ್ಕದ್ದು.
2. ಕಾಮಗಾರಿ ಸ್ಥಳದಲ್ಲಿ ಒಂದು ಟಿಪ್ಪಣಿ ಪುಸ್ತಕವನ್ನು ಸಂರಕ್ಷಿಸತಕ್ಕದ್ದು ಮತ್ತು ಇದರಲ್ಲಿ ಯಾವುದೇ ಬದಲಾವಣೆಗಳನ್ನು ಮಾಡದೇ ಮಹಾನಗರ ಪಾಲಿಕೆಯ ಪರಿವೀಕ್ಷಣಾ ಅಧಿಕಾರಿಗಳಿಗೆ ಸೂಚನೆಗಳನ್ನು ದಾಖಲಿಸಲು ಒದಗಿಸತಕ್ಕದ್ದು.
3. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ, 1976, ಇದರ 310 ನೇ ಪ್ರಕರಣದ ಪ್ರಕಾರ ಅಧಿಬೋಗ ಪ್ರಮಾಣ ಪತ್ರವನ್ನು ಪಡೆಯದೆ ಕಟ್ಟಡವನ್ನು ಅಧಿಬೋಗಕ್ಕೆ ಪಡೆಯತಕ್ಕದ್ದಲ್ಲ.
4. ಇತರೆ ಷರತ್ತುಗಳು.

ಪ್ರಾಧಿಕಾರದ ಸಹಿ

**ಅನುಸೂಚಿ–V ಬಿ**

**(ಉಪವಿಧಿ ಸಂಖ್ಯೆ : 4.1)**

**ಪರವಾನಿಗೆಯನ್ನು ತಿರಸ್ಕರಿಸುವ ನಮೂನೆ**

**ಇವರಿಂದ,**

ಆಯುಕ್ತರು,
ಬೆಂಗಳೂರು ಮಹಾನಗರ ಪಾಲಿಕೆ
ಬೆಂಗಳೂರು.

**ಇವರಿಗೆ,**

______________
______________
______________

ಮಾನ್ಯರೇ,

ಆಸ್ತಿಸಂಖ್ಯೆ ________________________ನಿವೇಶನ ಸಂಖ್ಯೆ _______ ಸಿಟಿ ಸರ್ವೆ ಸಂಖ್ಯೆ ____________ ವಾರ್ಡ್‌ಸಂಖ್ಯೆ _____________ಸ್ಥಳ/ಬೀದಿ __________________________________________________________ ಇದನ್ನು ಹೊಂದಿರುವ ಕಟ್ಟಡದ ನಿರ್ಮಾಣ/ ಪುನರ್ ನಿರ್ಮಾಣ /ಬದಲಾವಣೆಗಳನ್ನು ಮಾಡಲು/ನವೀಕರಣಕ್ಕಾಗಿ ಪರವಾನಿಗೆ ಕೋರಿ ಸಲ್ಲಿಸಿರುವ ನಿಮ್ಮ ಅರ್ಜಿ ಸಂಖ್ಯೆ __________ ದಿನಾಂಕ _____________ ಇದರ ಪ್ರಕಾರ ಕೆಳಕಂಡ ಕಾರಣಗಳಿಂದಾಗಿ ಪ್ರಾಧಿಕಾರವು ಪರವಾನಿಗೆಯನ್ನು ನಿರಾಕರಿಸಿರುವುದಾಗಿ ನಾನು ನಿಮಗೆ ತಿಳಿಸಬಯಸುತ್ತೇನೆ.

1.

2.

3.

4.

ಪ್ರಾಧಿಕಾರದ ಸಹಿ

## ಅನುಸೂಚಿ–VI

**(ಉಪವಿಧಿ ಸಂಖ್ಯೆ : 5.2)**

**ಕಾಮಗಾರಿಕೆಯ ಆರಂಭದ ಸೂಚನೆಯ ನಮೂನೆ**

ಆಸ್ತಿಸಂಖ್ಯೆ_____________ನಿವೇಶನದ ಸಂಖ್ಯೆ________ಸಿಟಿ ಸರ್ವೆ ಸಂಖ್ಯೆ __________ವಾರ್ಡ್‌ಸಂಖ್ಯೆ _____________ ಸ್ಥಳ/ಬೀದಿ _____________ ______________ಇದನ್ನು ಹೊಂದಿರುವ ಕಟ್ಟಡದ ನಿರ್ಮಾಣ/ಪುನರ್‌ನಿರ್ಮಾಣ/ವಾಸ್ತವಿಕ ಬದಲಾವಣೆ ಕಾರ್ಯವನ್ನು ನೊಂದಣಿ ಸಂಖ್ಯೆ __________________ಹೊಂದಿರುವ ನೋಂದಾಯಿತ ವಾಸ್ತುಶಿಲ್ಪಿ /ಇಂಜನಿಯರ್ / ಮೇಲ್ವಿಚಾರಕರು ಇದರ ಮೇಲ್ವಿಚಾರಣೆಯಲ್ಲಿ ನಿಮ್ಮ ಪರವಾನಿಗೆ ಸಂಖ್ಯೆ_____________ಎಲ್.ಪಿ. ________ದಿನಾಂಕ____________ ಇದರ ಮೂಲಕ ಪರವಾನಿಗೆ ಪಡೆದಿರುವ ನಕ್ಷೆಯ ಪ್ರಕಾರ ದಿನಾಂಕ ________ ರಂದು ಪ್ರಾರಂಭ ಮಾಡಲಾಗುತ್ತದೆ ಎಂಬುದಾಗಿ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾಲೀಕರ ಸಹಿ_______________

ಮಾಲೀಕರ ಹೆಸರು ____________

(ಬಿಡಿ ಅಕ್ಷರಗಳಲ್ಲಿ)

ದಿನಾಂಕ:– ಮಾಲೀಕರ ವಿಳಾಸ.________ ________

## ಅನುಸೂಚಿ–VII

**(ಉಪವಿಧಿ ಸಂಖ್ಯೆ : 5.3)**

**ಪ್ರಾರಂಭಿಕ ಪ್ರಮಾಣ ಪತ್ರದ ನಮೂನೆ**

ಇವರಿಗೆ,

__________

__________

__________

ಮಾನ್ಯರೇ,

**ವಿಷಯ:–** ಪರವಾನಿಗೆಸಂಖ್ಯೆ ________ಎಲ್.ಪಿ.________ ದಿನಾಂಕ ________ ಪರವಾನಿಗೆ ಪಡೆದಿರುವ ಕಟ್ಟಡದ ನಿರ್ಮಾಣವನ್ನು ಪ್ರಾರಂಭಿಸಲು ಅನುಮೋದನೆ ನೀಡುವ ಬಗ್ಗೆ.

~*||*~

ವಾರ್ಡ್‌ಸಂಖ್ಯೆ______ಇದರಲ್ಲಿನ__________ಸಂಖ್ಯೆ ಹೊಂದಿರುವ ಆಸ್ತಿಯನ್ನು ದಿನಾಂಕ_________ರಂದು ಪರಿವೀಕ್ಷಣೆ ಮಾಡಲಾಯಿತು ಮತ್ತು ಗುರುತುಮಾಡಿರುವ/ ನಿರ್ಮಿಸಿರುವ ತಳಪಾಯವನ್ನು/ ಗುರುತುಮಾಡಿರುವ/ ಸ್ಥಿರಪಡಿಸಿರುವ ಸ್ಥಂಭಗಳನ್ನು ಬೆಂಗಳೂರು ಮಹಾನಗರ ಪಾಲಿಕೆಯಿಂದ ಎಲ್.ಪಿ.ಸಂಖ್ಯೆ______________ಇದರಲ್ಲಿ ಪರವಾನಿಗೆ ನೀಡಿರುವ ಕಟ್ಟಡ ನಕ್ಷೆಯ ಪ್ರಕಾರ ಪರಿಶೀಲಿಸಲಾಗಿ ಈ ಕಾರ್ಯವು ಮಂಜೂರಾತಿ ನೀಡಿರುವ ನಕ್ಷೆಯ ಪ್ರಕಾರ ಇರುವುದಾಗಿ ಕಂಡುಬಂದಿದೆ. ಆದ್ದರಿಂದ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಕಾಮಗಾರಿಯನ್ನು ಮುಂದುವರಿಸಲು ಈ ಮೂಲಕ ಅನುಮೋದನೆ ನೀಡಲಾಗಿದೆ.

1. ಯಾವುದೇ ಬದಲಾವಣೆಗಳನ್ನಾಗಲೀ, ಮಾರ್ಪಾಡುಗಳನ್ನಾಗಲೀ, ಅಥವಾ ಉಲ್ಲಂಘನೆಗಳನ್ನಾಗಲೀ ಮಾಡದೆ ಕಟ್ಟುನಿಟ್ಟಾಗಿ ಮಂಜೂರಾತಿ ನೀಡಿರುವ ನಕ್ಷೆಯ ಮತ್ತು ಕಟ್ಟಡ ಉಪವಿಧಿಗಳ ಪ್ರಕಾರವೇ ಕಾಮಗಾರಿಯನ್ನು ಕೈಗೊಳ್ಳತಕ್ಕದ್ದು.
2. ಕಾಮಗಾರಿಯು, ಅಡಿಪಾಯದ ಅಥವಾ ಸ್ತಂಭಗಳ ಆಧಾರ ಅಥವಾ ಸ್ತಂಭಗಳ ಸ್ಥಿರೀಕರಣ ಕಾರ್ಯವು ಪೂರ್ಣಗೊಂಡ ಹಂತವನ್ನು ತಲುಪಿದಾಗ ನಿರ್ಮಾಣವನ್ನು ಮಂಜೂರಾತಿ ನೀಡಿರುವ ನಕ್ಷೆಯ ಮತ್ತು ಕಟ್ಟಡ ಉಪವಿಧಿಗಳ ಪ್ರಕಾರ ಕೈಗೊಂಡಿರುವ ಬಗ್ಗೆ ಕಾಮಗಾರಿಯನ್ನು ಪರಿವೀಕ್ಷಣೆ ಮತ್ತು ಶೋಧನೆ ಮಾಡಲು ನೆರವು ನೀಡುವ ದೃಷ್ಟಿಯಿಂದ ಮಹಾನಗರ ಪಾಲಿಕೆಗೆ ಸಂದೇಶವನ್ನು ಕಳುಹಿಸತಕ್ಕದ್ದು.
3. ಇತರೆ ಷರತ್ತುಗಳು.

ಕಛೇರಿ ಮುದ್ರೆ :

ಕಛೇರಿ ಪತ್ರ ವ್ಯವಹಾರ ಸಂಖ್ಯೆ :

ದಿನಾಂಕ:

ಪ್ರಾಧಿಕಾರದ ಸಹಿ___________

ಹೆಸರು, ಪದನಾಮ ಮತ್ತು ಪ್ರಾಧಿಕಾರದ ವಿಳಾಸ

___________________________

___________________________

## ಅನುಸೂಚಿ–VIII

### (ಉಪವಿಧಿ ಸಂಖ್ಯೆ : 5.6.1)

### ಕಾರ್ಯಪೂರ್ಣತಾ ಪ್ರಮಾಣಪತ್ರದ ನಮೂನೆ

ಆಸ್ತಿಸಂಖ್ಯೆ__________ನಿವೇಶನಸಂಖ್ಯೆ________ಸಿಟಿ ಸರ್ವೆ ಸಂಖ್ಯೆ ______ವಾರ್ಡ್‌ಸಂಖ್ಯೆ__ ಸ್ಥಳ/ಬೀದಿ___ ______ಇದನ್ನು ಹೊಂದಿರುವ ಕಟ್ಟಡ ನಿರ್ಮಾಣ /ಪುನರ್‌ನಿರ್ಮಾಣ /ವಾಸ್ತವಿಕ ಬದಲಾವಣೆ ಕಾರ್ಯದ ಮೇಲ್ವಿಚಾರಣೆಯನ್ನು ನಾನು ಮಾಡಿರುತ್ತೇನೆ ಮತ್ತು ಈ ಕಾರ್ಯವು ಎಲ್.ಪಿ.ಸಂಖ್ಯೆ ____________ದಿನಾಂಕ ____________ ಇದರ ಮೂಲಕ ಮಂಜೂರಾತಿ ನೀಡಿರುವ ನಕ್ಷೆಯ ಪ್ರಕಾರ ದಿನಾಂಕ __________ ರಂದು ಪೂರ್ಣ ಗೊಂಡಿರುತ್ತದೆ. ಕಾಮಗಾರಿಯು ನನಗೆ ತೃಪ್ತಿಕರವಾಗಿರುವ ಮಟ್ಟಿಗೆ ಪೂರ್ಣಗೊಂಡಿದೆ. ಕಾಮಗಾರಿಯ ವಿಧಾನ ಮತ್ತು ಎಲ್ಲಾ ಸಾಮಾಗ್ರಿಗಳನ್ನು (ಮಾದರಿ ಮತ್ತು ಶ್ರೇಣಿ) ಸಾಮಾನ್ಯ ಮತ್ತು ವಿವರವಾದ ಸ್ಪಷ್ಟೀಕರಣಗಳ ಮೇರೆಗೆ ಕಟ್ಟುನಿಟ್ಟಾಗಿ ನೆರವೇರಿಸಲಾಗಿದೆ. ಕಾಮಗಾರಿಯ ಹಂತದಲ್ಲಿ ಕಟ್ಟಡ ಉಪವಿಧಿಯ ಯಾವುದೇ ಉಪಬಂಧಗಳನ್ನಾಗಲೀ, ಮಂಜೂರಾತಿ ನೀಡಿರುವ ನಕ್ಷೆಯನ್ನಾಗಲೀ ಮತ್ತು ಅದರ ಅಡಿಯಲ್ಲಿ ವಿಧಿಸಿರುವ ಷರತ್ತುಗಳನ್ನಾಗಲೀ ಉಲ್ಲಂಘಿಸಿರುವುದಿಲ್ಲ. ಕಟ್ಟಡವು ಯಾವ ಉದ್ದೇಶಕ್ಕಾಗಿ ನಿರ್ಮಿಸಲಾಗಿದೆಯೋ, ಪುನರ್ ನಿರ್ಮಿಸಲಾಗಿದೆಯೋ ಅಥವಾ ವಿಸ್ತರಣೆಗಳ ಸಹಿತ ಅಥವಾ ರಹಿತವಾಗಿ ಬದಲಾವಣೆಗಳನ್ನು ಮಾಡಲಾಗಿದೆಯೋ ಅಂತಹ ಉದ್ದೇಶಕ್ಕೆ ಉಪಯೋಗಿಸಲು ಯೋಗ್ಯವಾಗಿದೆ. ಈ ಪ್ರದೇಶಕ್ಕೆ ಅಧಿಭೋಗ ಪ್ರಮಾಣ ಪತ್ರವನ್ನು ನೀಡುವಂತೆ ಕೋರುತ್ತೇನೆ.

ಎತ್ತರಿಸಿದ ಕಟ್ಟಡಗಳಿಗೆ ಅಥವಾ ಉಪವಿಧಿ 30.00 ರಲ್ಲಿ ನಮೂದಿಸಿರುವ ಕಟ್ಟಡಗಳಿಗೆ ಅನ್ವಯಿಸುತ್ತದೆ. ಕಟ್ಟಡವು ಭೂಕಂಪನದಿಂದಾಗುವ ಪರಿಣಾಮಗಳನ್ನು ತಡೆಯುವ ಸಾಮರ್ಥ್ಯಹೊಂದುವಂತೆ ರಾಷ್ಟ್ರೀಯ ಕಟ್ಟಡ ಸಂಸ್ಥೆ ಮತ್ತು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ ಪ್ರಕಟಣೆ **1893-2002** ಅವುಗಳಲ್ಲಿ ನಿಗದಿಪಡಿಸಿರುವ ವಿಧಿವಿಧಾನಗಳಂತೆ ಕಟ್ಟಡ ವಿನ್ಯಾಸವನ್ನು ರಚಿಸಿರುವುದಾಗಿಯೂ ಪ್ರಮಾಣೀಕರಿಸುತ್ತೇನೆ.

ನೊಂದಾಯಿತ ವಾಸ್ತುಶಿಲ್ಪಿ /ಇಂಜಿನಿಯರ್/ ಮೇಲ್ವಿಚಾರಕರಸಹಿ ___________________

ನೊಂದಾಯಿತ ವಾಸ್ತುಶಿಲ್ಪಿ/ ಇಂಜಿನಿಯರ್ /ಮೇಲ್ವೀಚಾರಕರ ಹೆಸರು

(ಬಿಡಿ ಅಕ್ಷರಗಳಲ್ಲಿ) ___________________

ನೊಂದಾಯಿತ ವಾಸ್ತಿ ಶಿಲ್ಪಿ /

ಇಂಜಿನಿಯರ್/ಮೇಲ್ವಿಚಾರಕರ

ನೊಂದಣಿ ಸಂಖ್ಯೆ_______________

ದಿನಾಂಕ : _______________

## ಅನುಸೂಚಿ–IX

### (ಉಪವಿಧಿ ಸಂಖ್ಯೆ : 5.6.1)

### ಸ್ವಾಧೀನಾನುಭವ ಪ್ರಮಾಣ ಪತ್ರದ ನಮೂನೆ.

ಆಸ್ತಿ ಸಂಖ್ಯೆ_______ ರಲ್ಲಿ ದಿನಾಂಕ:________ ಎಲ್.ಪಿ.ಸಂಖ್ಯೆ___________________ರಲ್ಲಿ __ ______________________ಗಳನ್ನು ಒಳಗೊಂಡ ____________ ಕಟ್ಟಡ ನಿರ್ಮಾಣಕ್ಕೆ ನಕ್ಷೆ ಮಂಜೂರಾತಿಯನ್ನು ನೀಡಲಾಗಿತ್ತು.

ನೊಂದಾಯಿತ ವಾಸ್ತುಶಿಲ್ಪಿ/ಇಂಜಿನಿಯರ್/ಮೇಲ್ವಿಚಾರಕರು ಕಟ್ಟಡದ ನಿರ್ಮಾಣ ಕಾರ್ಯವು ಪೂರ್ಣಗೊಂಡಿರುವುದಾಗಿ ಸ್ವೀಕರಿಸಿದ ಸಂದೇಶದ ಮೇರೆಗೆ ಮತ್ತು ___________________ ಇವರು ಸಲ್ಲಿಸಿದ ಪರಿವೀಕ್ಷಣಾ ವರದಿಯ ಆಧಾರದ ಮೇರೆಗೆ ಕಟ್ಟಡವನ್ನು ಪರಿವೀಕ್ಷಣೆ ನೆಡೆಸಿದ್ದು, ಅರ್ಜಿದಾರರು ಮಂಜೂರಾತಿ ನಕ್ಷೆಯನ್ವಯ ಕ್ಟಡ ನಿರ್ಮಿಸಿರುವುದು ಮಂಜೂರಾತಿ ನಕ್ಷೆಗೆ ಕೆಲವು ಬದಲಾವಣೆಗಳನ್ನು ಕೈಗೊಂಡಿರುವುದು ಕಂಡುಬಂದಿರುತ್ತದೆ. ಸದರಿ ಬದಲಾವಣೆಗಳು ಮಂಜೂರಾತಿಗೆ ಅನುಮತಿಸ ಬಹುದಾದ ಶೇಕಡ 5ರ ಮಿತಿಯೊಳಗೆ ಇರುವುದನ್ನು ಖಚಿತ ಪಡಿಸಿಕೊಂಡು ______________ ರೂ.ಗಳ ದಂಡವನ್ನು ವಿಧಿಸಿ _______________ರವರ ಶಿಫಾರಸ್ಸಿನಂತೆ ಆಯುಕ್ತರವರು ದಿನಾಂಕ: ______ ಟಿಪ್ಪಣಿಯಲ್ಲಿ ಬದಲಾವಣೆಗಳನ್ನು ಸಕ್ರಮಗೊಳಿಸಿರುತ್ತಾರೆ.

ದಂಡ ಶುಲ್ಕದ ಒಟ್ಟು ಮೊತ್ತ ರೂ_______(_________________________ರೂಪಾಯಿ)ಗಳನ್ನು ರಸೀದಿ ಸಂಖ್ಯೆ:___________________ ದಿನಾಂಕ:______ ರಲ್ಲಿ ಅರ್ಜಿದಾರರು ಪಾವತಿಸಿರುತ್ತಾರೆ. ಆದ್ದರಿಂದ ಅರ್ಜಿದಾರರು ಕೈಗೊಂಡ ಬದಲಾವಣೆಗಳನ್ನು ಸಕ್ರಮಗೊಳಿಸಲಾಗಿದೆ.

ಆದ್ದರಿಂದ ಈ ಕೆಳಕಂಡ ವಿವರಗಳನ್ನು ಒಳಪಟ್ಟಂತೆ ಆಸ್ತಿ ಸಂಖ್ಯೆ ______ ಹೊಂದಿರುವ ಕಟ್ಟಡ/ ಕಟ್ಟಡಗಳ ನಿರ್ಮಾಣಗಳನ್ನು ಪರವಾನಿಗೆ ಸಂಖ್ಯೆ ಎಲ್.ಪಿ.______________ದಿನಾಂಕ______ ಒಳಗೊಂಡ _________________ಉಪಯೋಗದ ಕಟ್ಟಡವನ್ನು ಅಧಿಭೋಗಿಸಲು ಈ ಮೂಲಕ ಅನುಮತಿ ನೀಡಲಾಗಿದೆ.

| ಅಂತಸ್ತು ವಿವರಣೆ | ವಿಸ್ತೀರ್ಣ | ಘಟಕಗಳ ಸಂಖ್ಯೆ / ಅಂತಸ್ತಿನ ಉಪಯೋಗ | ಷರಾ |
|---|---|---|---|
| | | | |
| | | | |

ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಕಟ್ಟಡ ಅಥವಾ ಕಟ್ಟಡದ ಒಂದು ಭಾಗದ ಹೆಚ್ಚುವರಿ ನಿರ್ಮಾಣವಾಗಲಿ ಅಥವಾ ನಿಖರ ಬದಲಾವಣೆ ಮಾಡುವುದಾಗಲಿ ಬೆಂಗಳೂರು ಮಹಾನಗರ ಪಾಲಿಕೆಯಿಂದ ನಿರ್ದಿಷ್ಟ ಅನುಮತಿಯನ್ನು ಪಡೆಯದಯೇ ಮಾಡತಕ್ಕದ್ದಲ್ಲ. ಒಂದು ವೇಳೆ ಅರ್ಜಿದಾರರು ಇದನ್ನು ಉಲ್ಲಂಘಿಸಿದ್ದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯು ಯಾವುದೇ ಮುನ್ಸೂಚನೆ ನೀಡದೇ ವ್ಯತಿರಿಕ್ತವಾದ / ಬದಲಾಯಿಸಿದ / ಅಧಿಕವಾಗಿ ಸೇರ್ಪಡಿಸಿದ ಭಾಗಗಳನ್ನು ಹೊಡೆದು ಹಾಕಲು ಅಧಿಕಾರ ಹೊಂದಿರುತ್ತದೆ.
2. ಸ್ವಾಧೀನಾನುಭವ ಪ್ರಮಾಣ ಪತ್ರ ನೀಡಿದ ದಿನಾಂಕ ಮೂರು ತಿಂಗಳ ಒಳಗಾಗಿ ಸಂದರ್ಶಕರು, ವಾಹನ ಚಾಲಕರು ಮತ್ತು ಸೇವಕರು ರವರಿಗೆ ಕಟ್ಟಡದ ಮೇಲು ಪಾಯ ವಿಸ್ತೀರ್ಣದೊಳಗೆ ನೆಲ ಅಂತಸ್ತಿನ ಮಟ್ಟದಲ್ಲಿ ಶೌಚಾಲಯ ಸೌಲಭ್ಯಗಳನ್ನು ನಿರ್ಮಿಸುವುದು.
3. ಮಂಜೂರಾದ ನಕ್ಷೆಯನ್ವಯ ತಳ ಅಂತಸ್ತನ್ನು ಕಾರು ನಿಲುಗಡೆಗೆ ಮಾತ್ರ ಉಪಯೋಗಿಸತಕ್ಕದ್ದು.
4. ಇತರೆ ಷರತ್ತುಗಳು

ಮೇಲಿನ ಷರತ್ತುಗಳನ್ನು ಉಲ್ಲಂಘಿಸಿದ್ದಲ್ಲಿ ನೀಡಿರುವ ಸ್ವಾಧೀನಾನುಭವ ಪ್ರಮಾಣ ಪತ್ರವನ್ನು ಹಿಂಪಡೆಯಲಾಗುವುದು.

ಕಛೇರಿ ಮುದ್ರೆ ಪ್ರಾಧಿಕಾರದ ಸಹಿ_____________

ಕಛೇರಿ ಪತ್ರ ವ್ಯವಹಾರ ಸಂಖ್ಯೆ ಹೆಸರು, ಪದನಾಮ ಮತ್ತು ಪ್ರಾಧಿಕಾರಿದ ವಿಳಾಸ

ದಿನಾಂಕ: ______________________

## ಅನುಸೂಚಿ–X

### ಕಟ್ಟಡದ ಸಾಲುರೇಖೆಗಳು

(ಕೋಷ್ಟಕ 6 ರ ಕೆಳಗಿನ ಸೂಚನೆ 4)

ಬೆಂಗಳೂರಿನಲ್ಲಿ ಕಟ್ಟಡದ ಸಾಲುರೇಖೆಗಳನ್ನು ಕೆಲವು ಪ್ರಮುಖ ರಸ್ತೆಗಳಿಗೆ ಗೊತ್ತುಪಡಿಸಲಾಗಿದೆ. ಗ್ರಾಮ/ಗ್ರಾಮಠಾಣಾ /ಬೆಳವಣಿಗೆ ಹೊಂದಿರುವ ಪ್ರದೇಶವು ಹೆದ್ದಾರಿಗಳಿಗೆ ಅಭಿಮುಖವಾಗಿರುವಲ್ಲಿ ಕಟ್ಟಡದ ಸಾಲು ರೇಖೆಯನ್ನು 5 ಮೀಟರ್ ಎಂದು ಗೊತ್ತುಪಡಿಸಲಾಗಿದೆ. ವಿವಿಧ ರೀತಿಯ ಕಟ್ಟಡಗಳಿಗೆ ಮುಂದಿನ ನಡುಜಾಗಗಳನ್ನು ಕೋಷ್ಟಕ 4 ಮತ್ತು 5 ರಲ್ಲಿ ಪ್ರತ್ಯೇಕವಾಗಿ ನಮೂದಿಸಲಾಗಿದೆ. ಇವುಗಳ ಗರಿಷ್ಠ ಅಳತೆಯನ್ನು ಮುಂಭಾಗದ ನಡುಜಾಗ / ಕಟ್ಟಡ ರೇಖೆ ಎಂಬುದಾಗಿ ಅಳವಡಿಸತಕ್ಕದ್ದು.

**ಕೆಳಕಂಡ ರಸ್ತೆಗಳಿಗೆ ಕಟ್ಟಡದ ಸಾಲು ರೇಖೆಗಳು ಈ ಕೆಳಕಂಡಂತೆ ಇರುತ್ತದೆ.**

| ಕ್ರ. ಸಂ | ರಸ್ತೆಯ ಹೆಸರು | ಅಗತ್ಯವಿರುವ ಕಟ್ಟಡದ ಸಾಲು ರೇಖೆ | ಪರಿಷ್ಕೃತ ವ್ಯಾಪಕಾ ಭಿವೃದ್ಧಿ ಯೋಜನೆಯ ಜಿಲ್ಲಾ ಸಂಖ್ಯೆ |
|---|---|---|---|
| 1 | ಸಂಪಿಗೆ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 2 | ಮಾರ್ಗೋಸಾ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 3 | 17ನೇ ಅಡ್ಡರಸ್ತೆ, ಮಲ್ಲೇಶ್ವರಂ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 4 | ಪ್ಲಾಟ್‌ಫಾರ್ಮ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 5 | ಟಿ.ಚೌಡಯ್ಯರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 2 |
| 6 | ಅರಮನೆ ಅಡ್ಡರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 7 | ಕೆ.ಬಿ.ಜಿ.ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 8 | 80 ಅಡಿರಸ್ತೆ, ರಾಜಾಜಿನಗರ | ರಸ್ತೆಯ ಅಂಚಿನಿಂದ 3.00 ಮೀಟರ್ | 2 |
| 9 | ವೆಸ್ಟ್ ಆಫ್ ಕಾರ್ಡ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 3 |
| 10 | ಮಾಗಡಿ ರಸ್ತೆ | ಹೌಸಿಂಗ್ ಬೋರ್ಡ್ ಕ್ವಾರ್ಟರ್ಸ್‌ವರೆಗೆ 5.00 ಮೀಟರ್ | 3 |
| 11 | ಮಾಗಡಿ ರಸ್ತೆ | ಹೌಸಿಂಗ್ ಬೋರ್ಡ್ ಕ್ವಾರ್ಟರ್ಸ್‌ಗಿಂತ ಆಚೆ 12.00 ಮೀಟರ್. | 3 |
| 12 | ತುಮಕೂರು ರಸ್ತೆ | ಸಿ.ಎಂ.ಟಿ.ಐ. ಕ್ವಾರ್ಟರ್ಸ್‌ವರೆಗೆ 5.00 ಮೀಟರ್ | 4 |
| 13 | ತುಮಕೂರು ರಸ್ತೆ | ಸಿ.ಎಂ.ಟಿ.ಐ. ಕ್ವಾರ್ಟರ್ಸ್‌ಗಿಂತ ಆಚೆ 12.00 ಮೀಟರ್ | 4 |
| 14 | ಹೆಚ್.ಎಂ.ಟಿ. ರಸ್ತೆ | ಸಿ.ಎಂ.ಟಿ.ಐ. ಕ್ವಾರ್ಟರ್ಸ್‌ಗಿಂತ ಆಚೆ 3.00 ಮೀಟರ್ | 5 |
| 15 | ತ್ರಿವೇಣಿ ರಸ್ತೆ, ಯಶವಂತಪುರ | ಸಿ.ಎಂ.ಟಿ.ಐ. ಕ್ವಾರ್ಟರ್ಸ್‌ಗಿಂತ ಆಚೆ 12.00 ಮೀಟರ್ | |
| 16 | ಬಳ್ಳಾರಿ ರಸ್ತೆ | ರಸ್ತೆಯ ಅಂಚಿನಿಂದ ಮೇಖ್ರಿಸರ್ಕಲ್‌ವರೆಗೆ5.00 ಮೀಟರ್ | 6 |
| 17 | ಬಳ್ಳಾರಿ ರಸ್ತೆ | ರಸ್ತೆಯ ಅಂಚಿನಿಂದ ಮೇಖ್ರಿ ಸರ್ಕಲ್‌ನ ಆಚೆ 12.00 ಮೀಟರ್ | 6 |
| 18 | ಟ್ಯಾನರಿ ರಸ್ತೆ | ದೇವರಜೀವನಹಳ್ಳಿಯ ಅಡ್ಡರಸ್ತೆಯವರೆಗೆ 3.00 ಮೀಟರ್ | 6 |
| 19 | ಟ್ಯಾನರಿ ರಸ್ತೆ | ದೇವರಜೀವನಹಳ್ಳಿಯ ಅಡ್ಡರಸ್ತೆಯಿಂದ ಆಚೆ 5.00 ಮೀಟರ್ | 6 |
| 20 | ಹಳೆ ಮದ್ರಾಸು ರಸ್ತೆ | ದೇವರಜೀವನಹಳ್ಳಿಯ ಅಡ್ಡರಸ್ತೆ (ನ್ಯೂ ಏರೋ ಇಂಜಿನ್ ಫ್ಯಾಕ್ಟರಿ) ಯಿಂದ ಆಚೆ, ಲೆವೆಲ್ ಕ್ರಾಸಿಂಗ್‌ವರೆಗೆ 5.00 ಮೀಟರ್. | 8 |
| 21 | ಹಳೆ ಮದ್ರಾಸು ರಸ್ತೆ | ದೇವರಜೀವನಹಳ್ಳಿಯ ಅಡ್ಡರಸ್ತೆ (ನ್ಯೂ ಏರೋ ಇಂಜಿನ್ ಫ್ಯಾಕ್ಟರಿ)ಯಿಂದ ಲೆವೆಲ್ ಕ್ರಾಸಿಂಗ್‌ನ ಆಚೆ 12.00 ಮೀಟರ್. | 8 |
| 22 | ಕೆಂಗಲ್ ಹನುಮಂತಯ್ಯ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್. | 9 |
| 23 | ಜಯಚಾಮರಾಜೇಂದ್ರರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 9 |
| 24 | ಲಾಲ್‌ಬಾಗ್ ಕೋಟೆ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 9 |
| 25 | ಹೆಚ್.ಸಿದ್ದಯ್ಯ ರಸ್ತೆ. | ರಸ್ತೆಯ ಅಂಚಿನಿಂದ 3.00 ಮೀಟರ್ | 9 |
| 26 | ರಾಜಾರಾಂಮೋಹನ್ ರಾಯ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 9 |
| 27 | ವರ್ತೂರು ರಸ್ತೆ | ಟ್ರಿನಿಟಿ ಚರ್ಚ್‌ನಿಂದ ಏರ್ ಪೋರ್ಟ್ ನಡುವೆ ರಸ್ತೆಯ ಅಂಚಿನಿಂದ 3.00 ಮೀಟರ್ | 9ಎ |
| 28 | ವರ್ತೂರು ರಸ್ತೆ | ಏರ್‌ಪೋರ್ಟ್‌ನಿಂದ ಆಚೆ 12.00 ಮೀಟರ್ | 9ಎ |

| ಕ್ರ. ಸಂ | ರಸ್ತೆಯ ಹೆಸರು | ಅಗತ್ಯವಿರುವ ಕಟ್ಟಡದ ಸಾಲು ರೇಖೆ | ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯ ಜಿಲ್ಲಾ ಸಂಖ್ಯೆ |
|---|---|---|---|
| 29 | ಚಿನ್ಮಯ ಮಿಷನ್ ಹಾಸ್ಪಿಟಲ್ ರಸ್ತೆ | ಆದರ್ಶ ಥಿಯೇಟರ್‌ನಿಂದ ಪೋಲೀಸ್ ಸ್ಟೇಷನ್‌ವರೆಗೆ 3.00 ಮೀಟರ್ | 9ಎ |
| 30 | ಇಂದಿರಾನಗರ100 ಅಡಿರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 9ಎ |
| 31 | ಮಹಾತ್ಮ ಗಾಂಧೀ ರಸ್ತೆ | ಡಿಕನ್ಸನ್ ರಸ್ತೆಯವರೆಗೆ 5.00 ಮೀಟರ್ | 10 |
| 32 | ಮಹಾತ್ಮ ಗಾಂಧೀ ರಸ್ತೆ | ಡಿಕನ್ಸನ್ ರಸ್ತೆಯಿಂದ ಟ್ರಿನಿಟಿ ಚರ್ಚ್‌ವರೆಗೆ 5.00 ಮೀಟರ್ | 10 |
| 33 | ಸೆಂಟ್ರಲ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 34 | ಇನ್‌ಫೆಂಟ್ರಿರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 35 | ಚಾಂದನಿ ಚೌಕ್ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 36 | ಡಿಸ್ಪೆನ್ಸರಿ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 37 | ಕಮರ್ಷಿಯಲ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 38 | ಡಿಕನ್ಸನ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 39 | ಕೆನ್ಸಿಂಗ್‌ಟನ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 40 | ಕಾವಲ್ರಿ ರಸ್ತೆ (ಕಾಮರಾಜ್ ರಸ್ತೆ) | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 41 | ಸೆಂಟ್ ಜಾನ್ಸ್ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 10 |
| 42 | ಸೆಂಟ್ ಜಾನ್ಸ್ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 10 |
| 43 | ಅಸ್ಸೆರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 44 | ವ್ಹೀಲರ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 45 | ಬ್ರಿಗೇಡ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 46 | ಸೆಂಟ್ ಮಾರ್ಕ್ಸ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 47 | ರೆಸಿಡೆನ್ಸಿ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 10 |
| 48 | ರಿಚ್ ಮಂಡ್‌ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 10 |
| 49 | ಕೇಂಬ್ರಿಡ್ಜ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 50 | ಮರ್ಫಿರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 51 | ವಿಧಾನ ವೀದಿ | ರಸ್ತೆಯ ಅಂಚಿನಿಂದ 9.00 ಮೀಟರ್ | 10 |
| 52 | ಅರಮನೆರಸ್ತೆ | ರಸ್ತೆಯ ಅಂಚಿನಿಂದ 6.00 ಮೀಟರ್ | 10 |
| 53 | ಮಿಲ್ಲರ್ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 10 |
| 54 | ಕ್ವೀನ್ಸ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 55 | ಜಯಮಹಲ್ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 56 | ನಂದಿದುರ್ಗರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 57 | ಕನ್ನಿಂಗ್‌ಹ್ಯಾಂ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 58 | ರೇಸ್‌ಕೋರ್ಸ್ ರಸ್ತೆ | ರಸ್ತೆಯ ಅಂಚಿನಿಂದ 6.00 ಮೀಟರ್ | 10 |
| 59 | ಕೆಂಪೇಗೌಡರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 11 |
| 60 | ಜಿಲ್ಲಾ ಕಛೇರಿ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 11 |
| 61 | ಅವಿನ್ಯೂರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 62 | ಚಿಕ್ಕಪೇಟೆ ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 63 | ಅಕ್ಕಿಪೇಟೆ ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 64 | ಕಾಟನ್‌ಪೇಟೆ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 65 | ನಗರ್ತಪೇಟೆ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 66 | ಈಸ್ಟ್ ಟ್ಯಾಂಕ್‌ಬಂಡ್ ರಸ್ತೆ (ಸುಭಾಷನಗರ) | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 67 | ಗೂಡ್ಸ್ ಶೆಡ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 68 | ಬಳೇ ಪೇಟೆ ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 69 | ಬಿ.ವಿ.ಕೆ. ಐಯ್ಯಂಗಾರ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |

| ಕ್ರ. ಸಂ | ರಸ್ತೆಯ ಹೆಸರು | ಅಗತ್ಯವಿರುವ ಕಟ್ಟಡದ ಸಾಲು ರೇಖೆ | ಪರಿಷ್ಕೃತ ವ್ಯಾಪಕಾ ಭಿವೃದ್ಧಿ ಯೋಜನೆಯ ಜಿಲ್ಲಾ ಸಂಖ್ಯೆ |
|---|---|---|---|
| 70 | ಆರ್ಕಾಟ್ ಶ್ರೀನಿವಾಸಾಚಾರರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 71 | ಶೇಷಾದ್ರಿ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 72 | ಸುಬೇದಾರ್ ಛತ್ರಂ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 73 | 5ನೇಮುಖ್ಯರಸ್ತೆ (ಗಾಂಧೀನಗರ) | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 74 | 1ನೇ ಮುಖ್ಯರಸ್ತೆ (ಗಾಂಧೀನಗರ) | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 75 | 3ನೇಅಡ್ಡರಸ್ತೆ (ಚಾಮರಾಜಪೇಟೆ) | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 76 | ನರಸಿಂಹರಾಜ ರಸ್ತೆ. | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 77 | ಸಿಲ್ವರ್ ಜ್ಯೂಬಿಲಿ ಪಾರ್ಕ್ರಸ್ತೆ. | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 78 | ಕಲಾಸಿಪಾಳ್ಯಂ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 11 |
| 79 | ಪಂಪ ಮಹಾಕವಿ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 12 |
| 80 | ಕನಕಪುರ ರಸ್ತೆ | ರಿಂಗ್ ರೋಡ್‌ವರೆಗೆ 5.00 ಮೀಟರ್ | 13 |
| 81 | ಕನಕಪುರ ರಸ್ತೆ | ರಿಂಗ್ ರೋಡಿನಿಂದ ಆಚೆ 12.00 ಮೀಟರ್ | 12 ಮತ್ತು 14 |
| 82 | ಹೊಸೂರುರಸ್ತೆ | ಔಟರ್ ರಿಂಗ್ ರೋಡ್‌ವರೆಗೆ ಸೆಂಟ್ರಲ್ ಸಿಲ್ಕ್ ಬೋರ್ಡ್ ಹತ್ತಿರ 5.00 ಮೀಟರ್ | 14 ಎ |
| 83 | ಹೊಸೂರುರಸ್ತೆ | ಔಟರ್ ರಿಂಗ್ ರೋಡ್‌ರಸ್ತೆಯಿಂದ ಆಚೆ 12.00 ಮೀಟರ್. | 13 |
| 84 | ಜಯನಗರಶಾಪಿಂಗ್ ಕಾಂಪ್ಲೆಕ್ಸ್‌ನ ಸುತ್ತ ಎಲ್ಲಾ ರಸ್ತೆಗಳು | ರಸ್ತೆಯ ಅಂಚಿನಿಂದ 3.00 ಮೀಟರ್ | 14 |
| 85 | ಸೌತ್ ಎಂಡ್ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 14 |
| 86 | ಈಸ್ಟ್ ಎಂಡ್ ರಸ್ತೆ | ರಸ್ತೆಯ ಅಂಚಿನಿಂದ 5.00 ಮೀಟರ್ | 14 |
| 87 | ಪಟಾಲಮ್ಮರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 14 |
| 88 | ಬನ್ನೇರುಘಟ್ಟರಸ್ತೆ | ಡ್ರೈವ್ ಇನ್ ಥಿಯೇಟರ್‌ವರೆಗೆ 5.00 ಮೀಟರ್ | 14 |
| 89 | ಬನ್ನೇರುಘಟ್ಟರಸ್ತೆ | ಡ್ರೈವ್ ಇನ್ ಥಿಯೇಟರ್‌ನಿಂದ ಆಚೆ 12.00 ಮೀಟರ್. | 14 |
| 90 | ಕೃಂಬಿಗಲ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 14 |
| 91 | ಅಶೋಕಾ ಪಿಲ್ಲರ್ ರಸ್ತೆ (100 ಅಡಿರಸ್ತೆ) | ರಸ್ತೆಯ ಅಂಚಿನಿಂದ 6.00 ಮೀಟರ್ | 14 |
| 92 | ಅಲೂರುವೆಂಕಟರಾವ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 93 | ಕೆ.ಆರ್.ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 94 | ಬುಲ್ ಟೆಂಪಲ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 95 | ಗಾಂಧೀಬಜ಼ಾರ್ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 96 | ನಾಗಸಂದ್ರರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 97 | ಬಿ.ಪಿ.ವಾಡಿಯರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 98 | ವಾಣಿ ವಿಲಾಸರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 99 | ವಾಸವಿ ಟೆಂಪಲ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 100 | ಡಯಾಗ್ನಲ್ ರಸ್ತೆ, ವಿ.ವಿ.ಪುರಂ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 101 | ಮೈಸೂರು ರಸ್ತೆ | ರಸ್ತೆಯ ಅಂಚಿನಿಂದ ರೆಮ್ಕೋವರೆಗೆ 5.00 ಮೀಟರ್ | 16 |
| 102 | ಮೈಸೂರು ರಸ್ತೆ | ರಸ್ತೆಯ ಅಂಚಿನಿಂದ ರೆಂಕೋನಿಂದ ಆಚೆ 12.00 ಮೀಟರ್ | 16 |
| 103 | ಹೆಣ್ಣೂರು ರಸ್ತೆ | ಸೇಲಂ ರೈಲ್ವೆ ಲೈನ್ ಲೆವೆಲ್ ಕ್ರಾಸಿಂಗ್‌ವರೆಗೆ 3.00 ಮೀಟರ್ | 16 |
| 104 | ಹೆಣ್ಣೂರು ರಸ್ತೆ | ಸೇಲಂ ರೈಲ್ವೆ ಲೈನ್ ಕ್ರಾಸಿಂಗ್ ನಿಂದ ಆಚೆ 8.00 ಮೀಟರ್ | --- |
| 105 | ಬಾಣಸವಾಡಿರಸ್ತೆ | ಸೇಲಂ ರೈಲ್ವೆ ಲೈನ್ ಕ್ರಾಸಿಂಗ್‌ವರೆಗೆ 3.00 ಮೀಟರ್ | 16 |
| 106 | ಬಾಣಸವಾಡಿರಸ್ತೆ | ಸೇಲಂ ರೈಲ್ವೆ ಲೈನ್ ಕ್ರಾಸಿಂಗ್‌ನಿಂದ ಆಚೆ 8.00 ಮೀಟರ್. | 16 |
| 107 | ಮುನಿರೆಡ್ಡಿಪಾಳ್ಯಂ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 6 |

| ಕ್ರ. ಸಂ | ರಸ್ತೆಯ ಹೆಸರು | ಅಗತ್ಯವಿರುವ ಕಟ್ಟಡದ ಸಾಲು ರೇಖೆ | ಪರಿಷ್ಕೃತ ವ್ಯಾಪಕಾ ಭಿವೃದ್ಧಿ ಯೋಜನೆಯ ಜಿಲ್ಲಾ ಸಂಖ್ಯೆ |
|---|---|---|---|
| 108 | ಪೂರ್ಣ ವೆಂಕಟರಾವ್‌ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 109 | ಪೋಲೀಸ್ ರಸ್ತೆ ಮತ್ತು ಬೇಲಿಮಠ್ ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 110 | ಕಿಲಾರಿರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 111 | ಸೆಪ್ಪಿಂಗ್ಸ್‌ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 11 |
| 112 | ನ್ಯೂ ಮಾರ್ಕೆಟ್‌ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 113 | ಜ್ಯೂವೆಲರ್ಸ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 114 | ಧರ್ಮರಾಜ ಕೋಯಿಲ್‌ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 115 | ಜುಮ್ಮಾ ಮಸ್ಜಿದ್ ರಸ್ತೆ, ಓ.ಪಿ.ಹೆಚ್.ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 116 | ನಾರಾಯಣ ಪಿಳ್ಳೈ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 117 | ಇಬ್ರಾಹಿಂ ಸಾಹೇಬ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 118 | ಥೋಪ್ಪಾ ಮೊದಲಿಯರ್‌ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 119 | ತಿಮ್ಮಯ್ಯರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 120 | ಲಿಂಡನ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 9 ಎ |
| 121 | ಆಸ್ಟಿನ್‌ಟೌನ್ ಸೆಂಟರ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 9 ಎ |
| 122 | ಕೆ.ಹೆಚ್.ಎನ್. ಬಹಾದೂರ್ ಅಬ್ದುಲ್ ರೆಹಮಾನ್ ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 9 ಎ |
| 123 | ಶೇಷಾದ್ರಿಪುರಂ 1ನೇ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 124 | 50 ಅಡಿರಸ್ತೆ ಹನುಮಂತನಗರ | ರಸ್ತೆಯ ಅಂಚಿನಿಂದ 3.00 ಮೀಟರ್ | 15 |
| 125 | 4ನೇ ಅಡ್ಡರಸ್ತೆ ಹನುಮಂತನಗರ | ರಸ್ತೆಯ ಅಂಚಿನಿಂದ 2.00 ಮೀಟರ್ | 15 |
| 126 | ತಾವರೆಕೆರೆ ಮುಖ್ಯರಸ್ತೆ (ಹೊಸೂರು ರಸ್ತೆ ಜಂಕ್ಷನ್‌ನಿಂದ ಸರ್ಕಲ್ ಆಫ್ ಓಲ್ಡ್ ವಿಲೇಜ್‌ವರೆಗೆ) | ರಸ್ತೆಯ ಅಂಚಿನಿಂದ 2.00 ಮೀಟರ್ | 13 |
| 127 | ಗವಿಪುರಂ ಗುಟ್ಟಹಳ್ಳಿ ಮುಖ್ಯರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 15 |
| 128 | ನೇತಾಜಿರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 6 |
| 129 | ಮಲ್ಲೇಶ್ವರಂ 8ನೇ ಮುಖ್ಯರಸ್ತೆ (6ನೇ ಕ್ರಾಸ್ ಜಂಕ್ಷನ್‌ನಿಂದ 15ನೇ ಕ್ರಾಸ್ ಜಂಕ್ಷನ್ ವರೆಗೆ). | ರಸ್ತೆಯ ಅಂಚಿನಿಂದ 3.00 ಮೀಟರ್ | 1 |
| 130 | ದತ್ತಾತ್ರೇಯ ಟೆಂಪಲ್ ಸ್ಟ್ರೀಟ್ | ರಸ್ತೆಯ ಅಂಚಿನಿಂದ 2.00 ಮೀಟರ್ | 1 |
| 131 | ನವರಂಗ್ ಸರ್ಕಲ್‌ನಿಂದ ಎಲ್.ಐ.ಸಿ. ಕಾಲೋನಿವರೆಗಿನ ವೆಸ್ಟ್ ಆಫ್ ಕಾರ್ಡ್‌ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 4 |
| 132 | ರಾಜಾಜಿನಗರದ ಭಾಷ್ಯಂ ಸರ್ಕಲ್‌ನಿಂದ ಇ.ಎಸ್.ಐ. ಹಾಸ್ಪಿಟಲ್‌ವರೆಗೆ | ರಸ್ತೆಯ ಅಂಚಿನಿಂದ 3.00 ಮೀಟರ್ | 2 |
| 133 | ಮಾಧವರಾವ್ ಮುದಲಿಯಾರ್ ರಸ್ತೆ | ರಸ್ತೆಯ ಅಂಚಿನಿಂದ 3.00 ಮೀಟರ್ | 10 |
| 134 | ಡೇವಿಸ್ ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |
| 135 | ರಾಬರ್ಟ್‌ಸನ್‌ರಸ್ತೆ | ರಸ್ತೆಯ ಅಂಚಿನಿಂದ 2.00 ಮೀಟರ್ | 10 |

## ಅನುಸೂಚಿ XI

(ಉಪವಿಧಿ 31.0)

## ಅಂಗವಿಕಲ ವ್ಯಕ್ತಿಗಳಿಗಾಗಿ ಸೌಲಭ್ಯಗಳು.

1. ಅಂಗವಿಕಲ ವ್ಯಕ್ತಿಗಳಿಗೆ ಈ ಕೆಳಕಂಡ ಸೌಲಭ್ಯಗಳು ಅನ್ವಯಿಸುತ್ತದೆ.

   (ಎ) ನಡೆಯಲು ಸಾಧ್ಯತೆ ಇಲ್ಲದೆ ಇರುವ ದೌರ್ಬಲ್ಯತೆ : ಯಾವುದೇ ಕಾರಣ ಅಥವಾ ಪ್ರದರ್ಶನಕ್ಕೆ ಸಂಬಂಧವಿಲ್ಲದೆ ಗಾಲಿ ಖುರ್ಚಿಯನ್ನು ಆಧರಿಸುವಂತೆ ಹಾನಿಗೆ ಒಳಪಡಿಸಿರುವ ದೌರ್ಬಲ್ಯಕ್ಕೆ ಹೊಂದಿರುವ ವ್ಯಕ್ತಿಗಳು.

   ಬಿ) ಪ್ರಯಾಸದಿಂದ ನಡೆಯಲು ಮಾತ್ರ ಸಾಧ್ಯತೆಯಿರುವ ದೌರ್ಬಲ್ಯತೆ : ಪ್ರಯಾಸದಿಂದ ನಡೆಯಬಲ್ಲ ಅಥವಾ ರಕ್ಷಣೆ ಇಲ್ಲದೆ ನಡೆಯಲಾರದಂತಹ ಹಾನಿಗೆ ಒಳಪಡಿಸಿರುವ ದೌರ್ಬಲ್ಯತೆ. ನಡುಕಟ್ಟುಗಳು ಅಥವಾ ಊರುಗೋಲುಗಳು, ಕೃತಕ ಕಾಲುಗಳು, ಸಂಧಿವಾತದ ಆಧಾರಗಳು, ಸೀಳಿತದ ಆಧಾರಗಳನ್ನು ಉಪಯೋಗಿಸುವ ವ್ಯಕ್ತಿಗಳು ಮತ್ತು ಶ್ವಾಸ ಕೋಶಕ್ಕೆ ಹಾಗೂ ಹೃದಯಕ್ಕೆ ಸಂಬಂಧಿಸಿದ ದೌರ್ಬಲ್ಯದಿಂದಾಗಿ ಪ್ರಯಾಸದಿಂದ ನಡೆಯಬಲ್ಲ ವ್ಯಕ್ತಿಗಳು.

   ಸಿ) ಕಿವುಡುತನದ ದೌರ್ಬಲ್ಯತೆ : ಸಾರ್ವಜನಿಕ ಸ್ಥಳಗಳಲ್ಲಿ ಎಚ್ಚರಿಕೆ ಸಂಕೇತಗಳನ್ನು ಸಂಪರ್ಕ ಮಾಡಿಕೊಳ್ಳದ ಅಥವಾ ಕೇಳಿಸಿಕೊಳ್ಳದ ಅಸಾಮರ್ಥ್ಯ ಉಂಟುಮಾಡಬಲ್ಲ ಕಿವುಡುತನ ಅಥವಾ ಕೇಳಿಸದೆ ಇರುವ ದೌರ್ಬಲ್ಯತೆ ಹೊಂದಿರುವ ವ್ಯಕ್ತಿಗಳು.

   ಡಿ) ಕುರುಡುತನದ ದೌರ್ಬಲ್ಯತೆ : ಪೂರ್ಣ ಕುರುಡು ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ವ್ಯವಹರಿಸುವ ವ್ಯಕ್ತಿಗಳಿಗೆ ಸುರಕ್ಷಿತವಾಗಿಲ್ಲದ ಅಥವಾ ಅಪಾಯಕ್ಕೆ ಒಳಗಾಗಬಹುದಾದ ದೃಷ್ಠಿ ಹೀನತೆ ಉಂಟುಮಾಡಬಹುದಾದ ದೌರ್ಬಲ್ಯತೆ ಹೊಂದಿರುವ ವ್ಯಕ್ತಿಗಳು.

2. ಪ್ರವೇಶ ಮಾರ್ಗ/ ನಡೆಯುವ ದಾರಿ : ನಿವೇಶನದ ಪ್ರವೇಶ ಸ್ಥಳ / ಮೇಲ್ಮೈ ವಾಹನ ನಿಲುಗಡೆ ಸ್ಥಳದಿಂದ ಕಟ್ಟಡದ ದ್ವಾರದವರೆವಿಗೆ ಪ್ರವೇಶ ಮಾರ್ಗ/ ನಡೆಯುವ ದಾರಿಯ ಅಗಲ ಕನಿಷ್ಠ 1.80 ಮೀಟರ್‌ಗಿಂತಲೂ ಕಡಿಮೆ ಇರಕೂಡದು ಮತ್ತು ಈ ಮಾರ್ಗವು ಶೇ. 5 ಕ್ಕಿಂತಲೂ ಹೆಚ್ಚು ಇಳಿಜಾರು ಪ್ರಮಾಣವನ್ನು ಹೊಂದಿರಬಾರದು.

3. ಮೇಲ್ಮೈ ವಾಹನ ನಿಲುಗಡೆ : ನಿವೇಶನದ ಪ್ರವೇಶದ್ವಾರಕ್ಕೆ ಹತ್ತಿರದಲ್ಲಿ ನಡುಜಾಗದ ಮೇಲ್ಮೈ ಪದರದಲ್ಲಿ ಎರಡು ವಾಹನ ನಿಲುಗಡೆ ಸ್ಥಳವನ್ನು ಒದಗಿಸಬೇಕು. ಕಟ್ಟಡದ ದ್ವಾರದಿಂದ ವಾಹನ ನಿಲುಗಡೆ ಸ್ಥಳವು 30 ಮೀ ಗಿಂತಲೂ ಹೆಚ್ಚು ದೂರ ಇರತಕ್ಕದ್ದಲ್ಲ.

4. ಗಾಲಿ ಖುರ್ಚಿಗಳನ್ನು ಉಪಯೋಗಿಸುವವರಿಗೆ ಸ್ಥಳಾವಕಾಶ : ಗಾಲಿ ಖುರ್ಚಿಯ ಚಲನಕ್ಕೆ ಸಾಕಷ್ಟು ಸ್ಥಳವನ್ನು ಒದಗಿಸಬೇಕು. ಗಾಲಿ ಖುರ್ಚಿಗಳ ನಿರ್ದಿಷ್ಟ ಅಳತೆಗಳನ್ನು 1050 ಮಿಮೀ X 750 ಮಿ.ಮೀ ಎಂದು ಪರಿಗಣಿಸತಕ್ಕದ್ದು ಗಾಲಿ ಖುರ್ಚಿಗಳ ಸುಗಮ ಚಲನಕ್ಕೆ ಅನುಕೂಲವಾಗುವಂತೆ ಬಾಗಿಲುಗಳ ಕನಿಷ್ಟ ಅಗಲ 900 ಮಿಮೀ ಇರತಕ್ಕದ್ದು.

5. ಮೇಲು ಪಾಯ ಮಟ್ಟಕ್ಕೆ ಪ್ರವೇಶ ಮಾರ್ಗ : ಕಡೆಯ ಪಕ್ಷ ಒಂದು ಪ್ರವೇಶವಾದರೂ ರ್‍ಯಾಂಪ್ ಮೂಲಕ ಪ್ರವೇಶ ಮಾರ್ಗ ಹೊಂದಿರತಕ್ಕದ್ದು. ರ್‍ಯಾಂಪಿನ ಕನಿಷ್ಠ ಅಗಲ 1.20 ಮೀ ಮತ್ತು ಗರಿಷ್ಠ ಇಳಿಜಾರು ಪ್ರಮಾಣ 1:10 ಇರತಕ್ಕದ್ದು.

6. ಪ್ರವೇಶ ದ್ವಾರದ ಮುಂದೆ ನಿಲುಗಡೆ ಸ್ಥಳ : ರ್‍ಯಾಂಪಿಗೆ ಹೊಂದಿಕೊಂಡಂತೆ ಪ್ರವೇಶ ದ್ವಾರದ ಹೊರಗಡೆ 1.80 ಮೀ X 2.00 ಮೀ ಕನಿಷ್ಠ ಅಳತೆ ಹೊಂದಿರುವ ನಿಲುಗಡೆ ಸ್ಥಳವನ್ನು ಒದಗಿಸಬೇಕು.

7. ಮೊಗಸಾಲೆಗಳು : ಮೊಗಸಾಲೆಗಳ ಕನಿಷ್ಠ ಅಗಲ 1.80 ಮೀ ಇರತಕ್ಕದ್ದು.

8. ಮಹಡಿ ಮೆಟ್ಟಿಲು : ಮಹಡಿ ಮೆಟ್ಟಿಲಿನ ಕನಿಷ್ಠ ಅಗಲ 1.50 ಮೀ ಇರತಕ್ಕದ್ದು ತುಳಿತಗಳ ಎತ್ತರ ಸಂಖ್ಯೆಯನ್ನು ಒಂದು ಸಾಲಿಗೆ 12 ಕ್ಕೆ ಮಿತಿಗೊಳಿಸತಕ್ಕದ್ದು. ತುಳಿತಗಳ ಅಗಲ 30 ಸೆಂ.ಮೀ ಗಿಂತ ಕಡಿಮೆ ಇರಕೂಡದು. ಮತ್ತು ತುಳಿತಗಳ ಎತ್ತರ 15 ಸೆಂ.ಮೀ ಗಿಂತ ಹೆಚ್ಚಿರಕೂಡದು.

9. ಲಿಫ್ಟ್‌ಗಳು :

   ಎ) ಉಪವಿಧಿಗಳ ಪ್ರಕಾರ ಲಿಫ್ಟ್‌ಗಳನ್ನು ಅಳವಡಿಸುವ ಅವಶ್ಯಕತೆ ಇದ್ದಲ್ಲಿ ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ ಸಂಸ್ಥೆಯ ಶಿಫಾರಸ್ಸಿನಂತೆ 13 ಪ್ರಯಾಣಿಕರ ಸಾಮರ್ಥ್ಯವುಳ್ಳ ಕೆಳಕಂಡ ಕೇಜ್ ಅಳತೆಗಳನ್ನು ಹೊಂದಿರುವ ಒಂದು ಲಿಫ್ಟ್‌ನ್ನಾದರೂ ಗಾಲಿ ಖುರ್ಚಿಯನ್ನು ಉಪಯೋಗಿಸುವವರಿಗಾಗಿ ಒದಗಿಸುವ ವ್ಯವಸ್ಥೆ ಮಾಡಬೇಕು.

   | | |
   |---|---|
   | ಒಳಭಾಗದ ಸ್ಪಷ್ಟ ಉದ್ದ | : 1100 ಮಿ.ಮೀ (1.10 ಮೀ) |
   | ಒಳಭಾಗದ ಸ್ಪಷ್ಟ ಅಗಲ | : 2000 ಮಿಮೀ (2.00 ಮೀ) |
   | ಪ್ರವೇಶ ದ್ವಾರದ ಅಗಲ | : 900 ಮಿಮೀ ( 0.90 ಮೀ) |

   ಬಿ) ಲಿಫ್ಟ್ ಲಾಭಿಯ ಒಳ ಭಾಗದ ಕನಿಷ್ಠ ಅಳತೆ 1.80 ಮೀ X 1.80 ಮೀ ಇರತಕ್ಕದ್ದು.

10. ಸ್ನಾನದ ಕೊಠಡಿಗಳು : ಅಗತ್ಯವಾದ ತೊಳೆಯುವ ಬೇಸಿನ್‌ನ್ನು ಒಳಗೊಂಡಂತೆ ಸ್ನಾನದ ಕೊಠಡಿಗಳ ಸಮೂಹದಲ್ಲಿ ಅಂಗವಿಕಲರಿಗಾಗಿ ವಿಶಿಷ್ಟವಾದ ಶೌಚಾಗಾರವನ್ನು ಅನುಕೂಲತೆಗಳನ್ನು ಗಮನದಲ್ಲಿರಿಸಿಕೊಂಡು ಒದಗಿಸತಕ್ಕದ್ದು.

    ಎ) ಸ್ನಾನದ ಕೊಠಡಿಯ ಕನಿಷ್ಠ ಅಳತೆ 1.50 ಮೀ X 1.75 ಮೀ ಇರತಕ್ಕದ್ದು.

    ಬಿ) ಅಂತಸ್ತು ನೆಲಮಟ್ಟದಿಂದ ಶೌಚಾಗಾರದ ಆಸನದ ಗರಿಷ್ಠ ಎತ್ತರ 0.50 ಮೀ ಇರತಕ್ಕದ್ದು.

11. ಕೈಕಂಬಿಗಳು : ಕೈಕಂಬಿಗಳನ್ನು ರ್‍ಯಾಂಪ್, ಮಹಡಿ ಮೆಟ್ಟಿಲುಗಳು, ಲಿಫ್ಟ್ ಗಳು ಮತ್ತು ಸ್ನಾನದ ಕೊಠಡಿಗಳಲ್ಲಿ ಅಳವಡಿಸಬೇಕು. ನೆಲಮಟ್ಟದಿಂದ ಕೈಕಂಬಿಗಳ ಸಾಮರ್ಥ್ಯ ಎತ್ತರ 800 ಮಿಮೀ ಇರತಕ್ಕದ್ದು. ಕಟ್ಟಡವು ಪ್ರಮುಖವಾಗಿ ಮಕ್ಕಳ ಉಪಯೋಗಕ್ಕಾಗಿ ಉದ್ದೇಶಿಸಲ್ಪಟ್ಟಿದ್ದರೆ, ಕೈಕಂಬಿಗಳ ಎತ್ತರವನ್ನು ಸೂಕ್ತವಾಗಿ ಬದಲಾಯಿಸುವುದು.

12. ಮಾರ್ಗದರ್ಶನ/ ಎಚ್ಚರಿಕೆ ನೀಡುವ ನೆಲ ಸಾಮಾಗ್ರಿ : ದೃಷ್ಟಿ ಹೀನರಿಗೆ ಮಾರ್ಗದರ್ಶನ/ಎಚ್ಚರಿಕೆ ನೀಡಲು ಸಮರ್ಪಕವೆನಿಸುವ ವಿವಿಧ ಬಣ್ಣಗಳನ್ನು ಹೊಂದಿರುವ ಅಥವಾ ಕಣ್ಣಿಗೆ ಹೊಳೆಯುವ ಭಿನ್ನವಾದ ಮೇಲ್ಮೈ ರಚನೆ ಹೊಂದಿರುವ ಮತ್ತು ಉಳಿದ ನೆಲ ಸಾಮಗ್ರಿಗಳಿಗಿಂತಲೂ ಪ್ರತ್ಯೇಕವಾಗಿ ಗುರ್ತಿಸಬಲ್ಲ ನೆಲಸಾಮಗ್ರಿಗಳನ್ನು ಮಾರ್ಗದರ್ಶನ/ಎಚ್ಚರಿಕೆ ನೀಡುವ ನೆಲಸಾಮಗ್ರಿ ಎಂದು ಪರಿಗಣಿಸಲಾಗಿದೆ. ಭಿನ್ನವಾದ ಮೇಲ್ಮೈ ರಚನೆಯ ಮೇಲೆ ಯಾವುದೇ ವ್ಯಕ್ತಿಯು ಊರುಗೋಲಿನ ಆಧಾರದಿಂದ ಚಲಿಸುವಾಗ ಕಿವಿಗಳಿಗೆ ಸಂಕೇತಗಳನ್ನು ಮತ್ತು ಇಂದ್ರಿಯಗಳಿಗೆ ಎಚ್ಚರಿಕೆಯನ್ನು ಕೊಡುವಂತಿರಬೇಕು. ಮಾರ್ಗದರ್ಶನ / ಎಚ್ಚರಿಕೆಯ ನೆಲಸಾಮಗ್ರಿಯು ಆಪತ್ತಿನ ಸ್ಥಳಗಳಲ್ಲಿ ಮಾರ್ಗದರ್ಶನ ಮತ್ತು ಎಚ್ಚರಿಕೆ ನೀಡಲು ಪರಿಣಾಮಕಾರಿಯಾಗಿರಬೇಕು. ಈ ನೆಲಸಾಮಗ್ರಿಗಳನ್ನು ಕೆಳಕಂಡ ಸ್ಥಳಗಳಲ್ಲಿ ಒದಗಿಸತಕ್ಕದ್ದು.

ಎ) ಕಟ್ಟಡದ ಪ್ರವೇಶ ಮಾರ್ಗದ ಮತ್ತು ವಾಹನ ನಿಲುಗಡೆಯ ಸ್ಥಳ.

ಬಿ) ಮಾಹಿತಿ ಹಲಗೆಯ ಕಡೆ ನಿರ್ಮಿಸಿರುವ ನಿಲುಗಡೆ ಸ್ಥಳ, ಸ್ವಾಗತ ಕೇಂದ್ರ, ಲಿಫ್ಟ್, ಮಹಡಿ ಮೆಟ್ಟಿಲುಗಳು ಮತ್ತು ಸ್ನಾನದ ಕೊಠಡಿಗಳು.

ಸಿ) ವಾಹನ ಸಂಚಾರವಿರುವ ಕಡೆಗಳಲ್ಲಿ ನಡೆಯುವ ದಾರಿಯ ಪ್ರಾರಂಭಿಕ ಮತ್ತು ಕೊನೆಯ ಹಂತಗಳು.

ಡಿ) ರ್ಯಾಂಪಿನ ಇಳಿಜಾರು ಮಟ್ಟದಲ್ಲಿ ಆಕಸ್ಮಿಕವಾಗಿ ಬದಲಾವಣೆಯಾಗುವ ಸ್ಥಳ ಮತ್ತು ರ್ಯಾಂಪಿನ ಪ್ರಾರಂಭದ ಮತ್ತು ಕೊನೆಯ ಹಂತಗಳು.

ಇ) ಕಟ್ಟಡದ ಆಗಮನ / ನಿರ್ಗಮನ ಭಾಗಗಳು.

13. ಸೂಕ್ತವಾದ ಸಂಕೇತಗಳು: ಕಟ್ಟಡದಲ್ಲಿ ಮಾಡಿರುವ ಸೌಲಭ್ಯಗಳನ್ನು ಸೂಕ್ತವಾಗಿ ಗುರುತಿಸಲು ಸಾಧ್ಯವಾಗುವಂತಹ ಸಂಕೇತಗಳನ್ನು ಅಂಗವಿಕಲ ವ್ಯಕ್ತಿಗಳಿಗಾಗಿ ಒದಗಿಸಬೇಕು. ದೃಷ್ಟಿ ದೌರ್ಬಲ್ಯ ಹೊಂದಿರುವ ವ್ಯಕ್ತಿಗಳಿಗೆ ಇತರ ಇಂದ್ರಿಯಗಳ ಮೂಲಕ ಶ್ರವಣ ಮತ್ತು ಸ್ಪರ್ಶದ ನೆರವಿನಿಂದ ದೌರ್ಬಲ್ಯದ ಕೊರತೆಯು ನೀಗುವಂತಿರಬೇಕು. ಅದರಂತೆ ದೃಷ್ಟಿ ಸಂಬಂಧದ ಸಂಕೇತಗಳಿಂದ ಕಿವುಡುತನ ಹೊಂದಿರುವ ವ್ಯಕ್ತಿಗಳಿಗೆ ಅನುಕೂಲವಾಗುವಂತಿರಬೇಕು.

ಸುಲಭವಾಗಿ ಓದಲು ಸಾಧ್ಯವಾಗುವ ಅಕ್ಷರಗಳ ಮೂಲಕ (20 ಮಿಮೀ ಅಳತೆಗಿಂತಲೂ ಕಡಿಮೆ ಇಲ್ಲದಂತೆ) ಸಂಕೇತಗಳನ್ನು ಸೂಕ್ತವಾದ ಸ್ಥಳಗಳಲ್ಲಿ ಯೋಜಿಸಬೇಕು. ಗೋಡೆಗಳ ಮೇಲೆ ಸೂಕ್ತವಾದ ಎತ್ತರದಲ್ಲಿ ಓದಲು ಸಾಧ್ಯವಿರುವಂತೆ ಪ್ರತ್ಯೇಕವಾದ ಉಬ್ಬಿದ ಅಕ್ಷರಗಳಿಂದ ರಚಿಸಿರುವ ಮಾಹಿತಿ ನೀಡುವ ಹಲಗೆಗಳನ್ನು ಕುರುಡುತನದ ದೌರ್ಬಲ್ಯತೆ ಹೊಂದಿರುವ ವ್ಯಕ್ತಿಗಳಿಗಾಗಿ ಒದಗಿಸಬೇಕು. ಮತ್ತು ಈ ವ್ಯವಸ್ಥೆಯು ಸಮೀಪದಿಂದ ಸಂಪರ್ಕಿಸುವಂತಿರಬೇಕು. ಸುರಕ್ಷಿತವಾಗಿ ನಡೆಯಲು ಭರವಸೆ ಉಂಟು ಮಾಡುವ ರೀತಿಯಲ್ಲಿ ನಡಿಗೆಗೆ ಅಡ್ಡಿಯನ್ನುಂಟು ಮಾಡುವ ಹೊರಕ್ಕೆ ಚಾಚಿರುವ ಸಂಕೇತಗಳನ್ನು ಒದಗಿಸಬಾರದು.

ಸಮೀಪ ದೃಷ್ಟಿ ಹೊಂದಿರುವ ವ್ಯಕ್ತಿಗಳಿಗೆ ಸಂಕೇತಗಳನ್ನು ಮುಖ್ಯವಾದ ಬಣ್ಣಗಳ ಮೂಲಕ ಗುರುತಿಸಲು ಸಾಧ್ಯವಾಗುವಂತೆ ಸಂಕೇತಗಳ ಮಾಹಿತಿಯು ಭಿನ್ನವಾಗಿ ಕಾಣುವ ಬಣ್ಣಗಳನ್ನು ಹೊಂದಿರಬೇಕು ಮತ್ತು ಸಂಕೇತಗಳನ್ನು ಸೂಕ್ತವಾಗಿ ದೀಪಗಳಿಂದ ಪ್ರಕಾಶಮಾನಗೊಳಿಸಬೇಕು.

## ಅನುಸೂಚಿ XII

**(ಉಪವಿಧಿ 32.0)**

## ಮಳೆ ನೀರಿನ ಸಂಗ್ರಹಣೆ

1. ಛಾವಣಿ ಮತ್ತು ನೆಲಗಟ್ಟು ಮಾಡಿದ ಮೇಲ್ಮೈ ಮೇಲೆ ಬಿದ್ದ ಮಳೆ ನೀರಿನ ಸಂಗ್ರಹಣೆಗಾಗಿ ಮುಂದೆ ತಿಳಿಸಿರುವ ವಿಧಾನಗಳನ್ನು ಅಂಗೀಕರಿಸಬಹುದು.

(i) ಕೆಸರು ಮಣ್ಣು ಮತ್ತು ತೇಲುವ ಪದಾರ್ಥಗಳು ಹೊರಗೆ ಉಳಿಯುವಂತೆ ಶೋಧಿಸಿ ಮಳೆ ನೀರನ್ನು ಕಾಲುವೆಗಳ ಮೂಲಕ ಕನಿಷ್ಠ 1.20 ಮೀ ವ್ಯಾಸ ಮತ್ತು 6.00 ಮೀ ಆಳಹೊಂದಿರುವ ತೆರೆದ ಬಾವಿಗೆ ಹರಿಸಬಹುದು. ಈ ಬಾವಿಗೆ ಬೆಳಕು ಮತ್ತು ಗಾಳಿಯ ಪ್ರವೇಶವಿರುವಂತಹ ಹೊದಿಕೆಯನ್ನು ಒದಗಿಸತಕ್ಕದ್ದು. ತೆರೆದ ಬಾವಿಯ ನೀರನ್ನು ಕುಡಿಯುವ ಉದ್ದೇಶಕ್ಕೆ ಹೊರತುಪಡಿಸಿ ಇತರ ಗೃಹಕೃತ್ಯದ ಉಪಯೋಗಗಳಾದ ಬಟ್ಟೆ ಒಗೆಯುವುದು, ಶುಚಿ ಮಾಡುವುದು, ಮತ್ತು ತೋಟಗಾರಿಕೆ ಮೊದಲಾದ ಉದ್ದೇಶಗಳಿಗೆ ಉಪಯೋಗಿಸಬಹುದು.

(ii) ಅಂತರ್ಜಲದ ಪುನರ್‌ವೃದ್ಧಿಗಾಗಿ ಕೊಳವೆ ಬಾವಿಯ ಮೂಲಕ ಮಳೆ ನೀರಿನ ಸಂಗ್ರಹಣೆಯನ್ನು ಮಾಡಬಹುದು. ಇಂತಹ ಕೊಳವೆ ಬಾವಿಯ ಸುತ್ತಲೂ ಕನಿಷ್ಠ ಒಂದು ಮೀಟರ್ ಅಗಲ ಮತ್ತು ಮೂರು ಮೀಟರ್ ಆಳ ಹೊಂದಿರುವ ಹಳ್ಳವನ್ನು ತೆಗೆದು ಪುನಃ ಈ ಹಳ್ಳವನ್ನು ಜೆಲ್ಲಿಕಲ್ಲು ಮತ್ತು ಮರಳಿನಿಂದ ತುಂಬಬೇಕು. ಅಂತರ್ಜಲವನ್ನು ಪುನರ್‌ವೃದ್ಧಿಪಡಿಸುವ ಸಲುವಾಗಿ ಶೋಧಿಸಿದ ಮಳೆಯ ನೀರನ್ನು ಪುನಃ ತುಂಬಿಸಿದ ಹಳ್ಳಕ್ಕೆ ಕಾಲುವೆಗಳ ಮೂಲಕ ಹರಿಸಬಹುದು.

(iii) ಅಗತ್ಯ ಸಾಮರ್ಥ್ಯ ಹೊಂದಿರುವ ನೀರಿನ ಶೇಖರಣೆ ತೊಟ್ಟಿಯನ್ನು ನಡುಜಾಗ ಅಥವಾ ಬಯಲು ಪ್ರದೇಶದಲ್ಲಿ ಅಭೇದ್ಯ ವಸ್ತುಗಳಿಂದ ನಿರ್ಮಿಸಬಹುದು ಮತ್ತು ಶೋಧಿಸಿದ ಮಳೆ ನೀರನ್ನು ಶೇಖರಣೆ ತೊಟ್ಟಿಗೆ ಕಾಲುವೆಗಳ ಮೂಲಕ ಹರಿಸಬಹುದು. ಶೇಖರಣೆ ತೊಟ್ಟಿಯನ್ನು ಮೇಲ್ಮೈ ಮಟ್ಟದ ಮೇಲೆ ಅನುಕೂಲಕರವಾದ ಎತ್ತರಕ್ಕೆ ಏರಿಸಬಹುದ ಮತ್ತು ಯಾವಾಗಲೂ ಬೆಳಕು ಮತ್ತು ಗಾಳಿಯ ಪ್ರವೇಶವಿರುವಂತಹ ಹೊದಿಕೆಯನ್ನು ಒದಗಿಸತಕ್ಕದ್ದು ಮತ್ತು ಮಳೆಯ ನೀರನ್ನು ಗೃಹಕೃತ್ಯದ ಉಪಯೋಗಗಳು : ಒಗೆಯುವುದು, ತೋಟಗಾರಿಕೆ ಮೊದಲಾದ ಉದ್ದೇಶಗಳಿಗಾಗಿ ಉಪಯೋಗಿಸಲು ಸೂಕ್ತ ಸ್ಥಳಗಳಲ್ಲಿ ನೀರು ಹೊರದೂಡುವ ನಲ್ಲಿಗಳನ್ನು ವ್ಯವಸ್ಥೆಗೊಳಿಸತಕ್ಕದ್ದು. ಶೇಖರಣೆ ತೊಟ್ಟಿಗಳಿಂದ ಹೊರ ಚೆಲ್ಲಲ್ಪಟ್ಟ ನೀರಿನ ವಿಲೇವಾರಿಗಾಗಿ ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

(iv) ಶೇಖರಿಸಿದ ಮೇಲೆ ಉಳಿಯುವ ಹೆಚ್ಚುವರಿ ಮಳೆಯ ನೀರನ್ನು ಸೋಸುವ ಗುಂಡಿಗಳು ಅಥವಾ ಕಂದಕಗಳು ಅಥವಾ ಇವುಗಳ ಸಂಯೋಜನೆಯ ಮೂಲಕ ಅಂತರ್ಜಲದ ಪುನರ್‌ವೃದ್ಧಿಗಾಗಿ ಭೂಮಿಯ ಒಳಗೆ ಇಂಗಿಸಬಹುದು. ಭೂ ಸ್ವರೂಪ ಮತ್ತು ಸ್ಥಳ ವಿವರಗಳ ಆಧಾರದ ಮೇಲೆ ಗುಂಡಿಗಳು 1.2 ಮೀ ಅಗಲ X 1.2 ಮೀ ಉದ್ದ X 2.00 ರಿಂದ 2.5 ಮೀ ಆಳ ಹೊಂದಿರತಕ್ಕದ್ದು. ಕಂದಕಗಳು 0.60 ಮೀ ಅಗಲ X 2.00 ಮೀ ರಿಂದ 6.00 ಮೀ ಉದ್ದ X 1.50ಮೀ ರಿಂದ 2.00 ಮೀ ಆಳ ಹೊಂದಿರತಕ್ಕದ್ದು. ಮೇಲ್ಛಾವಣಿ ಮಳೆನೀರನ್ನು ಗುಂಡಿಗಳು ಅಥವಾ ಕಂದಕಗಳಿಗೆ ಕಾಲುವೆಗಳ ಮೂಲಕ ಹರಿಸತಕ್ಕದ್ದು. ಅಂತಹ ಗುಂಡಿಗಳು ಮತ್ತು ಕಂದಕಗಳನ್ನು ಸೋಸುವ ಸಲಕರಣೆಯಾಗಿ ಉಪಯೋಗಿಸಲು ಕೆಳಕಂಡ ಸಾಮಗ್ರಿಗಳಿಂದ ತುಂಬಿಸತಕ್ಕದ್ದು.

ಎ) ತಳಪದರವನ್ನು ಆಳದಲ್ಲಿ ಶೇಕಡ 50 ಭಾಗದವರೆವಿಗೂ 40 ಮಿಮೀ ಅಳತೆಯ ಜಲ್ಲಿಕಲ್ಲುಗಳಿಂದ.

ಬಿ) ಕೆಳಗಿನ ಮಧ್ಯಮ ಪದರವನ್ನು ಆಳದಲ್ಲಿ ಶೇ. 20 ಭಾಗದವರೆವಿಗೂ 20 ಮಿ.ಮೀ ಅಳತೆಯ ಜಲ್ಲಿಕಲ್ಲುಗಳಿಂದ.

ಸಿ) ಮೇಲ್ಭಾಗದ ಮಧ್ಯಮ ಪದರವನ್ನು ಶೇ. 20 ಭಾಗದವರೆವಿಗೆ ದಪ್ಪ ಮರಳಿನಿಂದ.

ಡಿ) ಮೇಲ್ಪದರವನ್ನು ಸಣ್ಣ ಮರಳಿನ ತೆಳು ಪದರದಿಂದ.

ಇ) ಗುಂಡಿ / ಕಂದಕದ ಮೇಲ್ಭಾಗದ ಆಳದಲ್ಲಿ ಶೇ. 10 ಭಾಗವು ಖಾಲಿ ಇರತಕ್ಕದ್ದು ಮತ್ತು ಈ ಭಾಗದಲ್ಲಿ ಮಳೆಯ ನೀರು ಸಿಡಿಯದಹಾಗೆ ತಯಾರಿಸಿರುವ ಚಪ್ಪಡಿಯ ಮೇಲೆ ಛಾವಣಿಯ ಮೇಲಿನ ಮಳೆಯ ನೀರು ಬೀಳುವ ಹಾಗೆ ಅಂತಹ ಚಪ್ಪಡಿಯನ್ನು ಅಳವಡಿಸತಕ್ಕದ್ದು.

ಎಫ್) ಗುಂಡಿ / ಕಂದಕದ ತೆರೆದಿರುವ ಮೇಲ್ಭಾಗವನ್ನು ಇಟ್ಟಿಗೆಯ ಗೋಡೆಯಿಂದ ನಿರ್ಮಿಸತಕ್ಕದ್ದು ಮತ್ತು ಸೀಮೆಂಟಿನ ಗಾರೆಯಿಂದ ಗಿಲಾವು ಮಾಡತಕ್ಕದ್ದು. ಭೂಮಿಯ ಕೆಳಗೆ ಇಟ್ಟಿಗೆ ಗೋಡೆಯು ಗುಂಡಿ/ ಕಂದಕದೊಳಗೆ ಮೆದು ಮಣ್ಣು ಪ್ರವೇಶಿಸದಂತೆ ತಡೆಯುವಷ್ಟರ ಮಟ್ಟಿಗೆ ಆಳ ಹೊಂದಿರತಕ್ಕದ್ದು. ಭೂಮಿಯ ಮೇಲೆ ಗೋಡೆಯ ಎತ್ತರ ಕನಿಷ್ಠ 15 ಸೆಂ.ಮೀ ಇರತಕ್ಕದ್ದು.

ಜಿ) ಗುಂಡಿಗಳು/ ಕಂದಕಗಳ ಮೇಲೆ ರಂಧ್ರಗಳಿಂದ ಕೂಡಿರುವ ಕಾಂಕ್ರೀಟ್ ಚಪ್ಪಡಿಯನ್ನು ಒದಗಿಸತಕ್ಕದ್ದು.

(v) ಕಟ್ಟದ ಸುತ್ತಲಿನ ಬಯಲು ಜಾಗಕ್ಕೆ ನೆಲಗಟ್ಟು ಮೇಲ್ಮೈ ಒದಗಿಸಿದೆ ಇದ್ದಲ್ಲಿ ಮೇಲಿನ ಪದರವನ್ನು ಸಾಕಷ್ಟು ಆಳದವರೆವಿಗೆ ತೆಗೆಯತಕ್ಕದ್ದು. ಮತ್ತು ಮಳೆಯ ನೀರು ಭೂಮಿಯೊಳಗೆ ಇಂಗಲು ಅವಕಾಶವಾಗುವ ಹಾಗೆ ತುಸು ದಪ್ಪ ಮರಳಿನಿಂದ ತುಂಬಿಸತಕ್ಕದ್ದು.

2. ಕಟ್ಟಡದ ಮೇಲ್ಛಾವಣಿ ಮತ್ತು ತೆರೆದ ಬಾವಿ/ಕೊಳವೆ ಬಾವಿ / ಶೇಖರಣೆ ತೊಟ್ಟಿ/ ಅಂತರ್ಜಲ ಅಭಿವೃದ್ಧಿಗಾಗಿ ಉಪಯೋಗಿಸುವ ಗುಂಡಿ/ಕಂದಕಗಳನ್ನು ಸೋಸುವ ಮಾಧ್ಯಮದ ಮೂಲಕ ಹೆಚ್.ಡಿ.ಪಿ.ಇ /ಪಿ.ವಿ.ಸಿ ಕೊಳವೆಗಳಿಂದ ಸಂಪರ್ಕಪಡಿಸತಕ್ಕದ್ದು. ಛಾವಣಿ ಅಥವಾ ಮೇಲ್ಛಾವಣಿ ಸಂಗ್ರಹಣೆಯಿಂದ ಮೊದಲು ಹೊರಬೀಳುವ ನೀರು ಅನಪೇಕ್ಷಿತ ಕೊಳೆಯನ್ನು ಹೊಂದಿರುವ ಸಾಧ್ಯತೆ ಇರುವುದರಿಂದ ಈ ನೀರನ್ನು ಹೊರದೂಡಲು ಸಾಧ್ಯವಾಗುವಂತೆ ನಿಯಂತ್ರಣ ಕವಾಟಗಳನ್ನು ವ್ಯವಸ್ಥೆಗೊಳಿಸತಕ್ಕದ್ದು. ಎಲ್ಲ ಕೊಳವೆಗಳ ತೆರೆದ ರಂಧ್ರಗಳನ್ನು ಮತ್ತು ತೆರೆದ ಭಾಗಗಳನ್ನು ಸೊಳ್ಳೆ, (ಕ್ರಿಮಿ) ಗಳನ್ನು ತಡೆಗಟ್ಟುವ ತಂತಿ ಜಾಲದಿಂದ ಮುಚ್ಚತಕ್ಕದ್ದು. ಮಳೆ ನೀರನ್ನು ಪರಿಣಾಮಕಾರಿಯಾಗಿ ಹೊರದೂಡಲು ಪ್ರತಿ ನೂರು ಚದರ ಮೀ ಛಾವಣಿ ಮೇಲ್ಮೈ ವಿಸ್ತೀರ್ಣಕ್ಕೆ 100 ಮಿಮೀ ವ್ಯಾಸದ ಕನಿಷ್ಠ ಎರಡು ಮಳೆನೀರಿನ ಕೊಳವೆಗಳನ್ನು ಅಳವಡಿಸತಕ್ಕದ್ದು.

3. ಮಳೆ ನೀರು ಸಂಗ್ರಹಣೆ ನಿರ್ಮಾಣಗಳನ್ನು ಕಟ್ಟಡಗಳ ಮತ್ತು ಭೂಮಿಯ ಒಳಗಿನ ಕಾಮಗಾರಿಯ ದೃಢತೆಗೆ ದಕ್ಕೆ ಉಂಟಾಗದಂತೆ ನೆಲೆಗೊಳಿಸತಕ್ಕದ್ದು. ಕಟ್ಟಡದ ಅಥವಾ ಪಕ್ಕದ ಕಟ್ಟಡದ ಗೋಡೆಯ ಅಥವಾ ಅಡಿಪಾಯದ ಯಾವುದೇ ಭಾಗದಲ್ಲಿ ತೇವವನ್ನುಂಟುಮಾಡದ ರೀತಿಯಲ್ಲಿ ಈ ನಿರ್ಮಾಣಗಳನ್ನು ರಚಿಸತಕ್ಕದ್ದು.

## ಅನುಸೂಚಿ XIII

### ರಾಷ್ಟ್ರೀಯ ಕಟ್ಟಡ ಸಂಸ್ಥೆಯ ಅನುಸೂಚಿ II

### (ಉಪವಿಧಿ ಸಂಖ್ಯೆ 3.2.8)

### ಭಾರತ ಸರ್ಕಾರ

### ವಸತಿ ಮತ್ತು ಕಾಮಗಾರಿಗಳ ಮಂತ್ರಾಲಯ

### ರಾಷ್ಟ್ರೀಯ ಕಟ್ಟಡ ಸಂಸ್ಥೆ

### ಖಾಸಗಿ ವಲಯದ ವಸತಿ ಮತ್ತು ಕಟ್ಟಡ ನಿರ್ಮಾಣ ಕಾರ್ಯ ( ಕರ್ನಾಟಕ ರಾಜ್ಯ)

ನಗರ ಪಾಲಿಕೆಯ ಹೆಸರು : ಬೆಂಗಳೂರು ಮಹಾನಗರ ಪಾಲಿಕೆ

ಪಟ್ಟಣ : ಬೆಂಗಳೂರು

ಸೂಚನೆ : 1 ಮತ್ತು 2 ರ ಅಂಶಗಳಿಗೆ ಸಂಬಂಧಿಸಿದ್ದನ್ನು ದಯವಿಟ್ಟು ಭರ್ತಿಮಾಡಿ

ಸಂಕೇತ ಸಂಖ್ಯೆಗೆ : [ ]

---

1 . ನಿರ್ಮಾಣದ ಸಹಜ ಸ್ಥಿತಿ :– ಸಂಕೇತ ಸಂಖ್ಯೆ

ಅ) ಹೊಸ ನಿರ್ಮಾಣ 1.

ಆ) ಹಾಲಿ ಕಟ್ಟಡಕ್ಕೆ ಹೆಚ್ಚುವರಿ 2. [ ]

ಸಂಖ್ಯೆ

| 2. ನಿರ್ಮಾಣದ ಮಾದರಿ | ಒಟ್ಟು ಪ್ಲಿಂತ್ ವಿಸ್ತೀರ್ಣ (ಚ.ಮೀ) | ಒಟ್ಟು ನೆಲ ವಿಸ್ತೀರ್ಣ (ಚ.ಮೀ) |
|---|---|---|
| ಅ) ವಸತಿ ಕಟ್ಟಡಗಳು ಸಂಕೇತ ಸಂಖ್ಯೆ<br>I) ವಸತಿಗಳಿಗೆ 1<br>II) ವಸತಿಯೇತರ ಸ್ಥಳಗಳು (ವಸತಿ ಗೃಹಗಳು/ಧರ್ಮ ಶಾಲೆಗಳು/ತಂಗುದಾಣಗಳು/ ಭೋಜನ ಗೃಹಗಳು ಮತ್ತು ಕೂಟಗಳಂತಹವುಗಳಿಗೆ) 2 | | |

| | ಒಟ್ಟು ಪ್ಲಿಂತ್ ವಿಸ್ತೀರ್ಣ (ಚ.ಮೀ) | ಒಟ್ಟು ನೆಲ ವಿಸ್ತೀರ್ಣ (ಚ.ಮೀ) |
|---|---|---|
| ಆ) ಕೈಗಾರಿಕಾ ಕಟ್ಟಡಗಳು (ಕಾರ್ಖಾನೆಗಳು/ ಯಂತ್ರೋಪಕರಣಗಳು, ಕಾರ್ಯಾಗಾರಗಳು ಇತ್ಯಾದಿ) 3<br>ಇ) ವಾಣಿಜ್ಯ ಕಟ್ಟಡಗಳು (ಅಂಗಡಿಗಳು, ಮಳಿಗೆ, ಕಛೇರಿಗಳು, ಸಾರ್ವಜನಿಕ ಉದ್ಯಾನವನ, ಇತ್ಯಾದಿ) 4<br>ಈ) ಸಂಘ ಸಂಸ್ಥೆಗಳ ಕಟ್ಟಡಗಳು (ಶಾಲೆಗಳು, ಆಸ್ಪತ್ರೆಗಳು, ಮತ್ತು ಚಿಕಿತ್ಸಾಲಯಗಳು, ಧರ್ಮಸಂಬಂಧ ಕಟ್ಟಡಗಳು, ಇತ್ಯಾದಿ) 5<br>ಉ) ಇತರೆ ಕಟ್ಟಡಗಳು (ಸಾರ್ವಜನಿಕ ಕಟ್ಟಡಗಳು, ಸಾರ್ವಜನಿಕ ವಾಚನಾಲಯಗಳು, ಉಲ್ಲಾಸಕಟ್ಟಡಗಳು, ಇತ್ಯಾದಿ) 6<br>3. ಕಟ್ಟಡ ಅಂತಸ್ತುಗಳ ಸಂಖ್ಯೆ:_____ | | |

4. ವಸತಿ ಕಾಮಗಾರಿ ನಿರ್ಮಾಣದ ಮಾದರಿ ಮತ್ತು ಸಂಖ್ಯೆ:

| ವಸತಿ ಮಾದರಿ | ವಸತಿಗಳ ಸಂಖ್ಯೆ | | |
|---|---|---|---|
| | ಹೊಸ ನಿರ್ಮಾಣ | ವಸತಿಗಳಿಗೆ ಪರಿಣಾಮಕಾರಿಯದ ಹಾಲಿ ಕಟ್ಟಡಗಳಿಗೆ ಹೆಚ್ಚುವರಿ. | ಒಟ್ಟು ಪ್ಲಿಂತ್ ವಿಸ್ತೀರ್ಣ (ಚ.ಮೀ) |
| ಒಂದು ಕೊಠಡಿ ಘಟಕ<br>ಎರಡು ಕೊಠಡಿ ಘಟಕ<br>ಮೂರು ಕೊಠಡಿ ಘಟಕ<br>ನಾಲ್ಕು ಕೊಠಡಿ ಅಥವಾ ಮೇಲ್ಪಟ್ಟಕೊಠಡಿ ಘಟಕ | | | |

ಈ ಕೆಳಕಂಡ ಅಂಶಗಳ ವಿವರಗಳನ್ನು ಸ್ವಾಧೀನಾನುಭವ ಪ್ರಮಾಣಪತ್ರ ಅರ್ಜಿಸಲ್ಲಿಸುವ ವೇಳೆಯಲ್ಲಿ ಮಾತ್ರ ಭರ್ತಿಮಾಡತಕ್ಕದ್ದು.

5. ನಿರ್ಮಾಣದ ಅಂದಾಜು ವೆಚ್ಚ (ಲಭ್ಯವಿದ್ದಲ್ಲಿ ಮಾತ್ರ) _________ರೂ________

6. ಅನುಮತಿಸಿದ ಪ್ರಮಾಣ ಪತ್ರದ ದಿನಾಂಕ ಮತ್ತು ಸಂಖ್ಯೆ _________________

7. ನಿರ್ಮಾಣ ಪ್ರಾರಂಭಿಸಿದ ದಿನಾಂಕ _______________________________

8. ನಿರ್ಮಾಣ ಪೂರ್ಣಗೊಂಡ ದಿನಾಂಕ ______________________________

ದಿನಾಂಕ : ________________ (ಅರ್ಜಿದಾರರ ಸಹಿ)

ಅರ್ಜಿದಾರರ ಹೆಸರು ಮತ್ತು ವಿಳಾಸ :

(ಕಛೇರಿ ಉಪಯೋಗಕ್ಕೆ ಮಾತ್ರ)

ಅರ್ಜಿಯ ಉಲ್ಲೇಖಿತ ಸಂಖ್ಯೆ ______________________

ಅನುಮತಿಸಿದ/ ಪೂರ್ಣಗೊಂಡ

ಪ್ರಮಾಣಪತ್ರದ ಸಂಖ್ಯೆ ಮತ್ತು ದಿನಾಂಕ ______________________

**BANGALORE MAHANAGARA PALIKE, N.R. SQUARE, BANGALORE – 560 002**
**NOTIFICATION**
**NO. JDTP/PS/PR-20/2002-03 Bangalore, dated 24th February, 2004**

Whereas a Revised Comprehensive Development Plan with Zoning of land use and Regulations for the city of Bangalore have been published with the approval of the Government in G.O. No. HUD 139 MNJ 94 dated 05-01-95 under the provisions of the Karnataka Town and Country Planning Act, 1961;

Whereas the Government of Karnataka in G.O. No. UDD 223 MNU 2001 dated 07-01-2002 has directed B.C.C to prepare and publish new Building Bye-laws;

Whereas in exercise of the powers conferred under section 295 read with section 423 of the K.M.C Act 1976 (Karnataka Act, 14 of 1977) the Corporation of City of Bangalore published the "**B.C.C Draft Building Bye-laws 2003**" which would, on coming into force, supercede the B.C.C Bye-laws 1983 as required by clause (a) of section – 426 of the said Act in the official Gazette dated 07-02-03 for the information of public to submit objections / suggestions.

Whereas a number of objections / suggestions received from the public were considered and meetings were also held with civic associations and Institution of Engineers after which the Bangalore Mahanagara Palike Building Bye-laws 2003 were submitted to Government for final approval as per the provisions of the K.M.C Act 1976 ;

Whereas the Government of Karnataka in G.O. No. UDD 223 MNU 2001 dated 21-02-04 have approved and directed Bangalore Mahanagara Palike to publish the revised Bangalore Mahanagara Palike Building Bye-laws 2003 for final publication in the Official Gazette and to give effect to the same three (3) months after the final publication ;

Therefore, notice is hereby given to all concerned that the new Bangalore Mahanagara Palike Building Bye-laws 2003 will come into operation three (3) months from the date of their publication in the Official Gazette.

The printed copies of the Bangalore Mahanagara Palike Building Bye-laws -2003 in English and Kannada shall be sold to any person requiring them on payment of Rs. 100-00 only in the Office of the Joint Director of Town Planning, Bangalore Mahanagara Palike at N.R. Square, Bangalore – 560 002.

**M.R. SREENIVASA MURTHY**
Commissioner
Bangalore Mahanagara Palike

## BUILDING BYE-LAWS 2003

**PREAMBLE**

Whereas a Revised Comprehensive Development Plan with Zoning of Land Use Regulations for the City of Bangalore have been published with the approval of the Government in G.O. No.HUD/139/MNJ/94 dated 05-01-1995 under the provisions of the Karnataka Town and Country Planning Act, 1961;

Whereas the Government of Karnataka in G.O. No.UDD/223/MNU/2001 dated 07-01-2002 has directed Bangalore Mahanagara Palike to prepare and publish new Building Bye-laws;

Now therefore in exercise of the powers conferred by section 295 read with section 423 of the Karnataka Municipal Corporations Act, 1976 (Karnataka Act, 14 of 1977) the Bangalore Mahanagara Palike hereby makes the following draft bye-laws in supersession of Bangalore City Corporation Building Bye-laws 1983 and the same is hereby published as required by clause (a) of section 426 of the said Act for public inspection.

**PART I**
**GENERAL**

**1.0 SHORT TITLE, EXTENT AND COMMENCEMENT.**

1.1 These Bye-Laws shall be called " The Bangalore Mahanagara Palike Building Bye – Laws 2003".

1.2 These bye-laws shall be applicable within the jurisdiction of the Bangalore Mahanagara Palike as notified by the Government under Chapter II of the Karnataka Municipal Corporations Act, 1976.

1.3 These bye-laws shall come into operation three months after their final publication in the Official Gazette under section 428 of the Karnataka Municipal Corporations Act, 1976.

2.0 **DEFINITIONS**.

In these Bye-laws, unless the context otherwise requires, the expressions given below shall have the meaning indicated against each of them.

2.1 **'Act'** means the Karnataka Municipal Corporations Act, 1976.

2.2 **'agriculture'** includes horticulture, farming, growing of crops, fruits, vegetables, flowers, grass, fodder, trees of any kind or cultivation of soil, breeding and keeping of live stock including cattle, horses, donkeys, mules, pigs, fish, poultry and bees, the use of land which is ancillary to the farming of land or any purpose aforesaid but shall not include the use of any land attached to a

